The Karnatak Vidya Vardhaka Sangha,

DHARWAR.

ಕರ್ನಾಟಕ ವಿದ್ಯಾವರ್ಧಕ ಸಂಘ,

ಧಾರವಾಡ.

---

# UTTARARAMA-CHARITRA.

# ಉತ್ತರರಾಮಚರಿತ್ರ

# ನಾಟಕವು.

Price As. 12 ] [ ಬೆಲೆ ೧೨ ಆಣೆ.

The Karnataka Vidya-Vardhaka Sangha, Dharwar.

# UTTARA-RÂMACHARITRA

A SANSKRIT DRAMA

TRANSLATED INTO KANNADA.

BY

Dhondo Narsinha Mulbagal Esqr.

*Kannada Teacher, Training College,*

*DHÁRWÁR.*

Second edition, 2000 copies.

*Registered under the Government of India's Act XXV of 1867.*

1924.



Price : 12 Annas.

ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ.

ವಾಗ್ಭೂಷಣದ ೨೭ನೆಯ ಸಂಪುಟವಾಗಿ ಪ್ರಕಟಿಸಲ್ಪಟ್ಟ

# ಉತ್ತರ ರಾಮಚರಿತ್ರ

## ನಾಟಕವು.



॥ ಮತ್ತೇಭವಿಕ್ರೀಡಿತಂ ॥

ಪ್ರಥಮಕ್ಕುತ್ತರ ರಾಮಚಂದ್ರಚರಿತಂ ಗೀರ್ವಾಣ ಸದ್ವಾಣಿಯಿಂ ।
ದತಿರಮ್ಯಂ ಭವಭೂತಿಯಿಂ ವಿರಚಿತಂ ವಿದ್ವಜ್ಜನಾಹ್ಲಾದಕಂ ॥
ನುತಕರ್ನಾಟಕ ಭಾಷೆಯಿಂ ರಚಿತವಾಯ್ತೀಕೋತ್ತರಾಸ್ವಾದಕ ।
ಶತಸಂಖ್ಯಾತ ಶಕಾಬ ಭಾದ್ರಪದದೊಳ್ ತೇಜೋನೃಸಿಂಹಾಖ್ಯನಿಂ ॥ ೧ ॥



ಎರಡನೆಯ ಮುದ್ರಣವು; ೨೦೦೦ ಪ್ರತಿಗಳು.







೧೯೨೪.

ಬೆಲೆ ೧೨ ಆಣೆ.

ಈ ಪುಸ್ತಕವು ಧಾರವಾಡದ ಕರ್ನಾಟಕ ಪ್ರಿಂಟಿಗವರ್ಕ್ಸ, ಮುದ್ರಣಾಲಯದಲ್ಲಿ
ರಾ॥ ಮಾಧವ ಕೃಷ್ಣ ಜೋಶಿ ಇವರಿಂದ ಮುದ್ರಿಸಲ್ಪಟ್ಟು ಧಾರವಾಡದ
ಕ.ವಿ.ವ. ಸಂಘದ ಸನ್ಮಾನಿತ ಕಾರ್ಯದರ್ಶಿಗಳಾದ ಶ್ರೀ. ಬಿ.ಜಿ.
ಹಳಕಟ್ಟಿಯವರಿಂದ ಶ್ರೀ. ಚಾಮರಾಜಮಂದಿರದಲ್ಲಿ ವಾಗ್ಭೂಷಣ
ಪತ್ರಿಕೆಯ ೨೭ನೆ ಸಂಪುಟವಾಗಿ ಪ್ರಕಟಿಸಲ್ಪಟ್ಟಿತು.

ಈ ಗ್ರಂಥವನ್ನು

ಮುಂಬಯಿ ಹೈಕೋರ್ಟಿನ ವಕೀಲರೂ

ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ ಅಧ್ಯಕ್ಷರೂ

ಆಗಿರುವ

**ಮ. ರಾ. ಶ್ಯಾಮರಾವ ವಿಠ್ಠಲ**

**ಇವರಿಗೆ**

ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ

ವ್ಯವಸ್ಥಾಪಕ ಸಭೆಯವರು ಅಪ್ಪಣೆಯನ್ನು ಪಡೆದುಕೊಂಡು

ಕೃತಜ್ಞತೆಯಿಂದ ಕಾಣಿಕೆಯಾಗಿ

ಅರ್ಪಿಸಿದ್ದಾರೆ.

# ಪ್ರಸ್ತಾವನೆಯು.



ನಾನು ಸನ್ ೧೮೭೭ನೇ ಇಸವಿಯಲ್ಲಿ ಧಾರವಾಡ ಹಾಯಸ್ಕೂಲಿನ ಕನ್ನಡ ಅಧ್ಯಾಪಕನಾಗಿರುವಾಗ ಮೇಲಿನ ವರ್ಗದ ವಿದ್ಯಾರ್ಥಿಗಳು ಸಂಸ್ಕೃತ ನಾಟಕಗಳನ್ನೋದುವದನ್ನು ಕಂಡೆನು. ಅದರಿಂದ ನಾಟಕಗಳನ್ನು ಓದಬೇಕೆಂಬ ಹಂಬಲವು ನನಗೆ ಉಂಟಾಯಿತು. ಹಾಯಸ್ಕೂಲಿನ ಪುಸ್ತಕ ಸಂಗ್ರಹದಲ್ಲಿ ಸಂಸ್ಕೃತಭಾಷೆಯ ಹೆಸರಾದ ನಾಟಕಗಳೆಲ್ಲ ಓದುವವರಿಗೆ ಸಿಗುತ್ತಿರುವದರಿಂದ ನನ್ನ ಮನೋರಥಕ್ಕೆ ಮಾರ್ಗ ದೊರೆದಂತಾಗಿ ನಾನು ಪ್ರಸನ್ನರಾಘವ, ವೇಣೀಸಂಹಾರ, ಉತ್ತರರಾಮಚರಿತ್ರ, ಮೃಚ್ಛಕಟಿಕ, ಮುದ್ರಾರಾಕ್ಷಸ, ಪಾರ್ವತೀಪರಿಣಯ, ಮಾಲತೀಮಾಧವ, ಶಾಕುಂತಲ, ವಿಕ್ರಮೋರ್ವಶೀಯ ಮುಂತಾದ ನಾಟಕಗಳನ್ನು ವಿದ್ವಜ್ಜನರ ಸಹಾಯದಿಂದ ಓದಿ ಅರ್ಥವನ್ನು ತಿಳುಕೊಳ್ಳುತ್ತಿದ್ದೆನು. ಎಲ್ಲ ಸಂಸ್ಕೃತ ನಾಟಕಗಳು ಬಹುಶಃ ರಮ್ಯವಾಗೇ ಅವೆ. ಅದರಿಂದ ಅವು ಓದುವವರ ಮನಸ್ಸಿಗೆ ಬಹು ಪ್ರಿಯವಾಗುತ್ತವೆ. ಅದರಂತೆ ನನಗೂ ಆಯಿತು.

ಹೀಗೆ ಕೆಲವು ದಿವಸಗಳಾದ ಬಳಿಕ ನಮ್ಮ ಕನ್ನಡನುಡಿಯಲ್ಲಿ ಒಂದಾದರೂ ಇಂಥಾ ನಾಟಕವಿಲ್ಲದ್ದು ಕನ್ನಡಿಗರಿಗೆ ನಾಚಿಕೆಯೇ ಸರಿ ಎಂದು ಎಣಿಸಿ, ಮೊದಲು ಉತ್ತರರಾಮಚರಿತ್ರವನ್ನು ಕನ್ನಡಿಸುವ ಕೆಲಸಲ್ಲಿ ತೊಡಗಿದೆನು.

ಈ ಉತ್ತರರಾಮಚರಿತ್ರವು ಬಲುಸೊಗಸಿನ ಸೋಜಿಗದ ರಚನೆಯುಳ್ಳ ಕರುಣಾರಸದ ನಾಟಕವಾಗಿದೆ. ಇದರಲ್ಲಿ ಕವಿಯು ಎಷ್ಟೋ ಅನುಭವದ ಮಾತುಗಳನ್ನೂ, ನೀತಿಗಳನ್ನೂ ಯಥಾರ್ಥವಾಗಿ ಬಣ್ಣಿಸಿದ್ದಾನೆ. ಅವುಗಳಲ್ಲಿ "ಈ ಸಂಸಾರವು ಅಸ್ಥಿರವಾಗಿದೆ, ಇದರಲ್ಲಿ ಆಂಗಿದಾಗ್ಗೆ ಇಷ್ಟಜನರ ವಿಯೋಗವಾಗಿ ಮನಸ್ಸಿಗೆ ವ್ಯಥೆಯಾಗುತ್ತದೆ, ಇದರಿಂದ ಸಾಧುಗಳು ನಿರ್ವಿಣ್ಣರಾಗಿ

ವಿರಕ್ತಿಯನ್ನು ಪಡಿಸಿದ್ದಾರೆ " ಎಂಬ ಮಾತು ಮುಖ್ಯವಾದದ್ದಿದೆ. ಈ ನಾಟಕದ ಕವಿಯು ಭವಭೂತಿ ಎಂಬಾತನು. *

ಈತನು ಉತ್ತರರಾಮಚರಿತ್ರ, ಮಾಲತೀಮಾಧವ, ಮಹಾವೀರಚರಿತ್ರ ಎಂಬ ಮೂರು ನಾಟಕಗಳನ್ನು ಬರೆದಿದ್ದಾನೆ. ಈ ಮೂರರಲ್ಲಿ ಉತ್ತರರಾಮಚರಿತ್ರವೇ † ಮೇಲಾದದ್ದು. ಇದರಲ್ಲಿ ಕರುಣಾರಸವು ಎಷ್ಟಿರುತ್ತದೆಂದರೆ:— ಇದನ್ನು ಓದುವಾಗ್ಗೆ ಒಂದೊಂದು ಕಡೆಯಲ್ಲಿ ಕರುಣಾರಸದ ಹೆಚ್ಚುವಿಕೆಯಿಂದ ಕಣ್ಣಲ್ಲಿ ನೀರು ಬಂದು, ಕಣ್ಣು ಕಾಣಿಸದಂತೆ ಆಗುತ್ತದೆ. ಬಾಯಿಂದ ಶಬ್ದಗಳಂತೂ ಹೊರಡುವದೇ ಇಲ್ಲ.

ಈ ಪ್ರಕಾರದ ಉತ್ಕೃಷ್ಟ ರಚನೆಯನ್ನು ಭವಭೂತಿಯು ಈ ನಾಟಕದಲ್ಲಿ ಸಾಧಿಸಿದ್ದಾನೆ. ಆದರೆ ಈ ನಮ್ಮ ಕನ್ನಡದ ಭಾಷಾಂತರವು ಯಾವ ಪ್ರಕಾರದ್ದಿರುತ್ತದೆಂಬದನ್ನು ಇನ್ನುಮೇಲೆ ವಾಚಕರೇ ಓದಿ ಮನಗಾಣುವರು.

ಮೂಲಗ್ರಂಥದೊಳಗೆ ಪದ್ಯವಿದ್ದಲ್ಲಿ ಪದ್ಯವನ್ನೂ, ಗದ್ಯವಿದ್ದಲ್ಲಿ ಗದ್ಯವನ್ನೂ ಬಹುಶಃ ರಚಿಸಿ ಬರೆದಿದ್ದೇನೆ. ಇದರಿಂದ ಇದು ಚಂಪೂಗ್ರಂಥವಾಗಿರುತ್ತದೆ. ಇದರಲ್ಲಿ ಶ್ರೀರಾಮನು ರಾವಣನನ್ನು ಕೊಂದು ಅಯೋಧ್ಯೆಗೆ ಬಂದ ಮೇಲೆ ನಡೆದ ಇತಿಹಾಸದ ವರ್ಣನೆ ಇರುವದರಿಂದ ಇದಕ್ಕೆ ಉತ್ತರರಾಮಚರಿತ್ರವೆಂಬ ಹೆಸರು ಬಿತ್ತು.

ನಾನು ಇದನ್ನು ಆರೇಳು ತಿಂಗಳುಗಳಲ್ಲಿ ಕನ್ನಡಿಸಿ, ಸನ್ ೧೮೭೯ನೇ ಇಸವಿ ಸಪ್ಟಂಬರ ತಿಂಗಳಿಗೆ ಮುಗಿಸಿದೆನು.

---

* ವಿದರ್ಭ (ವರ್‍ಹಾಡ) ದೇಶದಲ್ಲಿ ಪದ್ಮಪುರವೆಂಬ ಪಟ್ಟಣವದೆ. ಅಲ್ಲಿ ಹಿಂದಕ್ಕೆ ಉದುಂಬರವೆಂಬ ಅಡ್ಡಹೆಸರುಳ್ಳಂಥ, ಯಜುರ್ವೇದದ ತೈತ್ತಿರೀಯಶಾಖಾಧ್ಯಾಯಿಗಳಾದಂಥ, ಕಶ್ಯಪಗೋತ್ರಜರಾದಂಥ, ಪಂಚಾಗ್ನಿಯ ಉಪಾಸಕರಾದಂಥ, ಚಾಂದ್ರಾಯಣಾದಿವ್ರತಗಳನ್ನು ಆಚರಿಸುವಂಥ, ಬ್ರಾಹ್ಮಣರು ಇರುತ್ತಿದ್ದರು. ಈವರ ಕುಲದಲ್ಲಿ ಭವಭೂತಿ ಎಂಬ ಮಹಾಕವಿಯು ಹುಟ್ಟಿದನು. ಈ ಕವಿಗೆ ಶ್ರೀಕಂಠನೆಂಬ ಇನ್ನೊಂದು ಹೆಸರೂ ಇತ್ತು. ಈತನ ಅಜ್ಜನ ಹೆಸರು ಭಟ್ಟಗೋಪಾಲನು, ತಂದೆಯ ಹೆಸರು ನೀಲಕಂಠನು. ಗುರುವಿನ ಹೆಸರು ಜ್ಞಾನನಿಧಿಯು.

ಈ ಕವಿಯೂ ಕಾಲಿದಾಸನೂ ಭೋಜರಾಜನ ಕಾಲಕ್ಕೆ ಇದ್ದರೆಂದು ಭರತಖಂಡದಲ್ಲೆಲ್ಲ ಪ್ರಸಿದ್ಧಿಯದೆ. ಆದರೆ ಹೊಸ ವಿದ್ವಾಂಸರು ಇವನಿಗೂ ಅವನಿಗೂ ಬಹುಕಾಲದ ಅಂತರವಿರುವದರಿಂದ ಇವರು ಒಂದೇಕಾಲಕ್ಕೆ ಇರುವದು ಅಸಂಭವವೆನ್ನುತ್ತಾರೆ.

† ಉತ್ತರೇ ರಾಮಚರಿತೇ ಭವಭೂತಿರ್ವಿಶಿಷ್ಯತೇ ।

ಇವನ್ನು ಬರೆಯುವಾಗ ನನ್ನ ಮಿತ್ರರಲ್ಲಿ ಒಬ್ಬ ಕನ್ನಡಿಗನು “ ಯಾಕೆ ವ್ಯರ್ಥ ಕಷ್ಟಪಡುತ್ತೀರಿ, ಇದರಿಂದ ನಿಮಗೆ ಏನೂ ಲಾಭವಿಲ್ಲ ” ಎಂದು ಹೇಳಿದನು. ಇದೇ ಮಾತು ನಿಜವಿರಬಹುದೆಂಬ ಭ್ರಮೆಯು ಎಷ್ಟೋ ದಿವಸ ನನ್ನ ಮನಸಿನೊಳಗಿಂದ ಹೋಗಲಿಲ್ಲ.

ಆದರೂ ಒಂದು ಅರ್ಜಿಯನ್ನು ಬರೆದು, ಧೈರ್ಯಮಾಡಿ, ಅದನ್ನೂ ನಾನು ಕನ್ನಡಿಸಿದ ಈ ಗ್ರಂಥವನ್ನೂ ಮೆಹರ್ಬಾನ ಚಾಟ್‌ಫೀಲ್ಡ ಸಾಹೇಬ ಬಹಾದ್ದೂರ, ಡಾಯರೇಕ್ಟರ, ಮುಂಬಯಿ, ಇವರ ಸನ್ನಿಧಿಗೆ ಇದಕ್ಕೆ ಸಹಾಯ ಬೇಡುವದಕ್ಕಾಗಿ ಕಳುಹಿದೆನು. ಮುಂದೆ ಕೆಲಸ ನಡೆದು ಅಯ್ದಾರು ತಿಂಗಳ ಮೇಲೆ ಮೆ॥ ಡಾಯರೇಕ್ಟರ ದೊರೆಗಳವರು ಕನ್ನಡದ ದುರ್ದೈವದ ಮೂಲಕವಾಗಿ “ ನಮ್ಮ ಗ್ರಂಥಕ್ಕೆ ಏನೂ ದೊರೆಯುವದಿಲ್ಲ ” ಎಂದು ಅಪ್ಪಣೆಯನ್ನು ದಯಪಾಲಿಸಿದರು. ಆ ಬಳಿಕ ನನ್ನ ಉತ್ತರರಾಮಚರಿತ್ರವು ತಿರುಗಾಡಿ ದಣಿದು ಬಂದು ನನ್ನ ಗಂಟಿನಲ್ಲಿ ಉಸ್ಸೆಂದು ಕೂತುಕೊಂಡಿತು.

ಹೀಗಾದರೂ ನಾನು ನಿರಾಶನಾಗದೆ ಯಾವ ರೀತಿಯಿಂದಾದರೂ ಈ ಗ್ರಂಥವು ಪ್ರಸಿದ್ಧವಾಗಲೆಂದು ಕನ್ನಡ ಶಾಲಾಪತ್ರಕರ್ತರಿಗೆ ಅದರ ನಾಲ್ಕು ಅಂಕಗಳನ್ನು ಬರೆದು ಕೊಟ್ಟೆನು. ಅವರು ಅದನ್ನೆಲ್ಲ ತಮ್ಮ ಕನ್ನಡಶಾಲಾಪತ್ರಕದಲ್ಲಿ ತುಸುತುಸು ಮುದ್ರಿಸಿ ಪ್ರಸಿದ್ಧಮಾಡಿದರು.

ಬಳಿಕ ಇಲ್ಲಿಯ ಹೈಸ್ಕೂಲಿನಿಂದ ರೋಣದ ಸಾಲೆಗೆ ನನಗೆ ವರ್ಗವಾಯಿತು. ನಾನು ಅಲ್ಲಿಯ ಶಾಲಾಧ್ಯಾಪಕನಿರುವಾಗ ಮ॥ ರಾ॥ ರಾ॥ ರೊದ್ದ ಶ್ರೀನಿವಾಸರಾಯರು ಶಾಲೆಯ ಪರೀಕ್ಷೆಗೆ ಬಂದಾಗ್ಗೆ ಈ ಪುಸ್ತಕದ ಪ್ರಸ್ತಾಪವನ್ನು ತೆಗೆಯಲು, ಇದನ್ನು ನಾವು ಮುದ್ರಿಸುತ್ತೇವೆಂದು ಹೇಳಿ ಪುಸ್ತಕವನ್ನು ತಕ್ಕೊಂಡು ಹೋಗಿ ಧಾರವಾಡ ಜ್ಞಾನವರ್ಧಕ ಮುದ್ರಾಲಯದ ಒಡೆಯರ ಕೈಯಲ್ಲಿ ಕೊಟ್ಟರು. ಅವರು ಅದನ್ನು ತಮ್ಮ ಪುಸ್ತಕಗಳ ಸಂಗ್ರಹದಲ್ಲಿ ಇಟ್ಟು ಬಿಟ್ಟರು.

ಆ ಮೇಲೆ ಧಾರವಾಡ ಕನ್ನಡದ ಶಿಕ್ಷಣಾಲಯದ ಕನ್ನಡ ಅಧ್ಯಾಪಕರ ಸ್ಥಳವು ತೆರವಾದದ್ದರಿಂದ ಅದಕ್ಕೆ ನನ್ನನ್ನು ಶಿಫಾರಸ ಮಾಡುವಾಗ ಮ॥ ರಾ॥ ಭುಜಂಗರಾಯರು ಮತ್ತು ಮ॥ ರಾ॥ ರೊದ್ದ ಶ್ರೀನಿವಾಸರಾಯರು ಇವರಿಬ್ಬರು ಉತ್ತರರಾಮಚರಿತ್ರದ ಹೆಸರನ್ನು ಹೊರಗೆ ತೆಗೆದು ಅದಕ್ಕೆ ಆಶ್ರಯವನ್ನು ಕೊಡಬೇಕೆಂದು ಮೆ॥ ರಸೆಲ್‌ಸಾಹೇಬ ಎಜ್ಯುಕೇಶನಲ್ ಇನಸ್ಪೆಕ್ಟರ ಪ್ರಾಂತ

ದಕ್ಷಿಣಭಾಗ ಇವರಿಗೆ ಸೂಚಿಸಿದರು. ಈ ಕಾರಣದಿಂದ ಸನ್ ೧೮೮೫ನೇ ಇಸ ವಿಯು ಡಿಸೆಂಬರ ತಿಂಗಳಲ್ಲಿ ನನಗೆ ಪುನಃ ಧಾರವಾಡಕ್ಕೆ ಕನ್ನಡದ ಶಿಕ್ಷಣಾಲಯಕ್ಕೆ ವರ್ಗವಾಯಿತು. ಇಲ್ಲಿಗೆ ಬಂದಮೇಲೆ ನಾನು ಮತ್ತೆ ಜ್ಞಾನವರ್ಧಕ ಮುದ್ರಾಲಯದ ಒಡೆಯರಿಗೆ ಹೇಳಿಕೊಂಡದ್ದರಿಂದ ಅವರು ಈ ನಾಟಕವನ್ನು ತಮಗೆ ಅನುವಾದಂತೆ ನಾಲ್ಕು ಅಂಕಗಳ ವರೆಗೆ ಶಿಲಾಕ್ಷರಗಳಿಂದ ಮುದ್ರಿಸಿದರು. ಆದರೂ ಆ ಕೆಲಸವು ಮುಂದೆ ಸಾಗದೆ ಅಷ್ಟಕ್ಕೇ ನಿಂತುಹೋಯಿತು.

ಇಷ್ಟರಲ್ಲಿ ಮೆ॥ ರಸೆಲ್‌ಸಾಹೇಬರವರ ಸನ್ನಿಧಿಗೆ ಉತ್ತರರಾಮಚರಿತ್ರದ ಶಿಫಾರಸುಗಳು ತಲಪಿದ್ದವು. ಅವರು “ ಈ ಪುಸ್ತಕವು ಲೋಕಪ್ರಿಯವಾಗಿವೆ, ಇದಕ್ಕೆ ರಾಜಶೇಖರದ ಆಶ್ವಾಸಗಳಿಗೆ ಕೊಟ್ಟಂತೆ ಆಶ್ರಯವನ್ನು ಕೊಡಬೇಕು. ” ಎಂದು ಮೆ॥ ಡಾಯರೆಕ್ಟರ ದೊರೆಗಳಿಗೆ ಬರೆದದ್ದರಿಂದ ಡಾಯರೇಕ್ಟರ ದೊರೆಗಳು “ಉತ್ತರರಾಮಚರಿತ್ರವು ಮುದ್ರಿಸಲ್ಪಟ್ಟಿತೋ ಹ್ಯಾಗೆ;” ಎಂದು ಮ॥ ರಾ॥ ಕನ್ನಡದ ಶಿಕ್ಷಣಾಲಯದ ಪ್ರಿನ್ಸಿಪಾಲ ಭುಜಂಗರಾಯರನ್ನು ಕೇಳಿದರು. ಪ್ರಿನ್ಸಿಪಾಲರವರು ನನ್ನನ್ನು ಕೇಳಿಕೊಂಡು, ಇನ್ನೂ ಮುದ್ರಿಸಲಿಲ್ಲವೆಂದು ಬರೆದು ತಿಳುಹಿದರು. ಆ ಬಳಿಕ ಸುದೈವದಿಂದ ಅವೇ ಡಾಯರೆಕ್ಟರ ದೊರೆಗಳಿಂದ ಇನ್ನೂರು ರೂಪಾಯಿಗಳ ಹುಂಡಿಯು ಉತ್ತಮರಾಮಚರಿತ್ರದ ಇನಾಮೆಂದು ನನಗೆ ಬಂದು ತಲಪಿತು.* ಆಗ ನನ್ನ ಮಗಳ ಮದುವೆಯ ಕಾರ್ಯ ನಡೆದಿತ್ತು, ಅವಕ್ಕೆ ಆಯತ್ತವಾಗಿ ರೂಪಾಯಿಗಳು ದೊರೆದವೆಂದು ನಾನು ಆ ಹಣವನ್ನು ಬಳಸಿಕೊಂಡ ಕಾರಣ ಉತ್ತರರಾಮಚರಿತ್ರವನ್ನು ಮುದ್ರಿಸುವದು ಹಾಗೇ ಉಳಿಯಿತು.

ಇತ್ತಲಾಗಿ ಕನ್ನಡ ಗ್ರಂಥಗಳ ಸುದೈವದಿಂದ ಧಾರವಾಡದಲ್ಲಿ ಮ॥ ರಾ॥ ರಾಮಚಂದ್ರರಾವ ದೇಶಪಾಂಡೆ ನರೇಂದ್ರ ಇವರ ಅಶ್ರಾಂತ ಪ್ರಯತ್ನದಿಂದ, ಕನ್ನಡ ಪುಸ್ತಕಗಳಿಗೆ ನೆರವಾಗುವ ಉದ್ದೇಶದಿಂದ, “ ಕರ್ನಾಟಕ ವಿದ್ಯಾವರ್ಧಕ ಸಂಘವು ” ಎಂಬ ಹೊಸ ಸಂಸ್ಥೆಯು ಉಂಟಾಯಿತು.

ಈ ಸಂಘದ ಸನ್ಮಾನಿತಕಾರ್ಯದರ್ಶಿಗಳೂ ಜನಕರೂ ಆದ ರಾಮಚಂದ್ರರಾವ ದೇಶಪಾಂಡೆ ಇವರಿಗೆ ನಾನು ನನ್ನ ನಾಟಕವನ್ನು ದಯಮಾಡಿ ಸಂಘದ ವೆಚ್ಚದಿಂದಅಚ್ಚು ಹಾಕಿಸಬೇಕೆಂದು ಬಿನ್ನಹ ಮಾಡಿಕೊಂಡೆನು.

---

* ಮೆ॥ ಚಾಟ್‌ಫೀಲ್ಡ ದೊರೆಗಳು ಈ ಪ್ರಕಾರ ನನಗೆ ನನ್ನ ಗ್ರಂಥಗಳ ಸಂಬಂಧದಿಂದ ಬಹಳ ಉಪಕಾರ ಮಾಡಿದ್ದಾರೆ. ಅದನ್ನು ನಾನು ಜನ್ಮವಿರುವವರೆಗೂ ಮರೆಯಲಾರೆನು.

ಅವರು ವ್ಯವಸ್ಥಾಪಕರ ಒಪ್ಪಿಗೆಯಿಂದ ಇದನ್ನು ಮುದ್ರಿಸುವಂತೆ ಮಾಡಿದರು. ಅದರಿಂದ ಕರ್ನಾಟಕವಿದ್ಯಾವರ್ಧಕಸಂಘವೂ, ಅದರ ಜನಕರೂ, ವ್ಯವಸ್ಥಾಪಕರೂ, ಇದಕ್ಕೆ ನೆರವಾದ ಎಲ್ಲ ಸಜ್ಜನರೂ "ದೇವರೇ ನಿನ್ನ ದಯದಿಂದ ಬಹುಕಾಲ ಸಂತೋಷದಲ್ಲಿ ಇರಲಿ" ಎಂದು ಆತನನ್ನು ಬೇಡಿಕೊಂಡು ಉತ್ತರರಾಮಚರಿತ್ರದ ಇತಿಹಾಸವನ್ನು ಇಲ್ಲಿಗೆ ಮುಗಿಸುತ್ತೇನೆ.

ಈ ಪ್ರಕಾರ ಈ ಗ್ರಂಥವು ರಚಿಸಲ್ಪಟ್ಟು ಈವೊತ್ತಿಗೆ ಹದಿನಾಲ್ಕು ವರ್ಷಗಳಾದವು. ಆದರೂ ಮುದ್ರಿಸೋಣವಾಗದೆ ಹಾಗೇ ಉಳಿದಿತ್ತು. ಇದನ್ನು ಮುಂದಕ್ಕೆ ತಂದ ಯಶಸ್ಸೆಲ್ಲ ನಮ್ಮ ಕರ್ನಾಟಕವಿದ್ಯಾವರ್ಧಕಸಂಘಕ್ಕೆ ಸಲ್ಲತಕ್ಕದ್ದಾಗಿದೆ. ಈ ಗ್ರಂಥವನ್ನು ಪ್ರಸಿದ್ಧಮಾಡಿದ ಕರ್ನಾಟಕವಿದ್ಯಾವರ್ಧಕಸಂಘಕ್ಕೆ ನಾನು ಇದನ್ನು ಕೃತಜ್ಞತೆಯಿಂದ ಅರ್ಪಿಸಿರುತ್ತೇನೆ. ಮತ್ತು ಸನ್ ೧೮೯೧ ನೇ ಇಸವಿ ಸಪ್ಟಂಬರ ೨೭ನೇ ತಾರೀಖಿನದಿವಸ ಆದ ಸಂಘದ ವಾರ್ಷಿಕಸಮಾರಂಭಕ್ಕೆ ಕನ್ನಡದ ಅಭಿಮಾನಿಗಳು ರಚಿಸಿ ಕಳುಹಿದ ಉಪದೇಶಪತ್ರವಾದ ಒಂದು ಪದವನ್ನು ಇಲ್ಲಿ ಬರೆದು ಈ ಪ್ರಸ್ತಾವನೆಯನ್ನು ಮುಗಿಸುತ್ತೇನೆ.

॥ ಧಾಟಿ « ಸ್ಮರಣೆಯೊಂದೇ ಸಾಲದೆ » ಎಂಬಂತೆ ॥

ಏನೇನಾಡುವಿರಿ । ಮಕ್ಕಳಿರಾ । ಏನೇನು ಮಾಡಿದಿರಿ ॥ ಏನಾಡುವಿರೆಲೆ । ನಾ ನಿಮ್ಮ ತಾಯಲ್ಲೇ । ಸೂನುಗಳಿರಾ ಎನ್ನ । ಧ್ಯಾನವ ತೊರೆದಿರಿ ॥ ಪಲ್ಲ ॥

ಅರಸುಡಿ[illegible]ಲಿಯುವಿರಿ । ಎನ್ನೊಳು ನೀವು । ಬಿರುನುಡಿ [illegible]ಡಿಯುವಿರಿ । ಮರೆದು ಕನ್ನಡ ತಾಯಿಯೊ । ಗುರುತನ್ನೆ ನಿರುತದಿ । ಪರಭಾಷ [illegible]ಯಿಯೊ । ಮರೆಹೊಕ್ಕು ಬಾಳ್ವರೆ ? ॥ ೧ ॥

ಸುಜನೋತ್ತಂಸಕನು । ಹೊನ್ನನು ಹಂಪ । ಗಜಗನು ಗುಣನಂದಿಯು ॥ ಸುಜನಕೇಶಿರಾಜವಿಜಯಾದಿಸುತರೆನ್ನ । ಭಜಿಸಿ ತಮ್ಮಯ ಕೀರ್ತಿ । ಧ್ವಜವ ನಿಲ್ಲಿಸಲಿಲ್ಲೇ ॥ ೨ ॥

ವೀರಷಡಕ್ಷರಿಯು । ಭೀಮನು ದೇವ । ನೂರಲಕ್ಷ್ಮೀಪತಿಯು ॥ ಚಾರುಮತಿಯೊಳೆನ್ನ । ಸಾರಿ ಸೇವಿಸಿ ಕೀರ್ತಿಯೂರಿ ನಿಮ್ಮಯ ಕಯ್ಗೆ ಸೇರಿಸಿದರು ಎನ್ನ ॥ ೩ ॥

ಇಂತಿಂತಪರ ಕುಲದಿ । ಮಕ್ಕಳಿರಾ । ಎಂತವರುದಿಸಿರಿ ॥ ಸಂತಾನಬೇಕೆಂದು । ಚಿಂತಿಸಲೇಕಿನ್ನು । ಕಾಂತಾರದೊಳು ತಾಯಿ । ನಿಂತಳುತಿ ಹೊಡೆ ॥ ೪ ॥

ಹಿರಿಯರು ಬರೆದೋದಿಟ್ಟ । ನಾಟಕ ಚಂಪೂ । ಸುರಸ ಕಾವ್ಯಾದಿಗಳು ॥ ಮರೆಗೆ ಬಿದ್ದವು ನಿಮ್ಮ । ಹುರುಳಿಲ್ಲದಿರುವಿಗೆ । ಜಿರಿಹುಳಹುಪ್ಪಡಿ । ಹರಿದು ಹಾಳಾದವು ॥ ೫ ॥

ಸವೆದು ಹೋಯ್ತುಭಿಮಾನವು । ನಿಮ್ಮೊಳು ನೀವೆ । ತವೆ ಜರೆದಾಡುವಿರಿ॥ ಸವತಿಮಕ್ಕಳಿಗೆನ್ನ । ಭವಣಿಗೆ ಕೊಟ್ಟಿರಿ । ಅವರು ಸುಲಿದು ಕುಟ್ಟೆ ಕವರಿಕೊಂಬರು ನಿಮ್ಮ ॥ ೬ ॥

ಕನ್ನಡಿಗರು ನೀವೆಲ್ಲಾ । ಕಣ್ದೆರೆಯಿರಿ । ಇನ್ನಾದರು ಬೇಗನೆ ॥ ಕನ್ನಡ ಮಾತೆಯು । ಮನ್ನಿಸಿ ಕೀರ್ತಿಯ । ಸನ್ನುತಧ್ವಜವನು ಮುನ್ನಿನಂತಿರಿಸಿರಿ ॥ ೭ ॥

ಕನ್ನಡದೇಶದಲ್ಲಿ । ಕನ್ನಡನುಡಿ । ಚೆನ್ನಾಗಿ ಬೆಳೆಯುವಂತೆ ॥ ಕನ್ನಡಿಗರಿಗೆಲ್ಲ ಮುನ್ನಬುದ್ಧಿಯನಿತ್ತು । ಪನ್ನಂಗಶಾಯಿ । ಕಾರುಣ್ಯದಿ ಪೊರೆಯಲಿ ॥ ೮ ॥

ಧಾರವಾಡ,
ತಾರೀಖು ೨೪ ನೇ ಜನವರಿ
ಸನ್ ೧೯೮೭ ಇಸವಿ.

ಧೋಂಡೋ ನರಸಿಂಹ
ಮುಳಬಾಗಲ.

# ಎರಡನೆಯ ಮುದ್ರಣದ ಪ್ರಸ್ತಾವನೆ.

ಉತ್ತರರಾಮಚರಿತ್ರ ನಾಟಕದಂಥ ಉತ್ಕೃಷ್ಟ ಗ್ರಂಥದ ದ್ವಿತೀಯ ಮುದ್ರಣದ ಪ್ರತಿಗಳನ್ನು, ಮೂವತ್ತೆರಡು ವರ್ಷಗಳ ತರುವಾಯವಾದರೂ ಕನ್ನಡಿಗರ ಕೈಗೆ ಕೊಡುವ ಸುಯೋಗವು ಒದಗಿಬಂದುದು ಸಂಘದ ಸುದೈವದ ಸಂಗತಿಯು; ಕನ್ನಡಿಗರಾದ ನಮ್ಮೆಲ್ಲರಿಗೆ ಸಂತೋಷದ ಸಂಗತಿಯೂ ಹೌದು.

ಮಹಾಕವಿ ಭವಭೂತಿಯ ನಾಟಕತ್ರಯದಲ್ಲಿ ಉತ್ಕೃಷ್ಟವಾಗೆಣಿಸಲ್ಪಟ್ಟಿರುವ ಮೂಲ ನಾಟಕವನ್ನು ರಸಪರಿಪಾಕಕ್ಕೆ ಎಷ್ಟುಮಾತ್ರವೂ ಕುಂದುಕೊರತೆಗಳೊದಗದಂತೆ ಕನ್ನಡಿಸಿದ ಶ್ರೀ. **ಮುಳಬಾಗಲ ಧೊಂಡೋಪಂತರ** ಚರಿತ್ರ ವಿಷಯಕವಾದ ನಾಲ್ಕು ಮಾತುಗಳನ್ನು ಇಲ್ಲಿ ಬರೆಯುವದು ಅತ್ಯವಶ್ಯವೆನ್ನಿಸಿದರೂ ಅದಕ್ಕೆ ಆವಶ್ಯಕವಾಗಿರುವ ಸಾಧನಸಾಮಗ್ರಿಗಳು ದುರ್ಲಭವಾಗಿವೆಯೆಂದು ಬರೆಯಲು ತುಂಬಾ ವ್ಯಸನವಾಗುವದು. ಅಂಥ ಸಾಮಗ್ರಿಗಳನ್ನು ಕನ್ನಡಿಗರಲ್ಲಿ ಯಾರಾದರೂ ಸಂಪೂರ್ಣವಾಗಿ ಇಲ್ಲವೆ ತಮಗೆ ತಿಳಿದಷ್ಟರ ಮಟ್ಟಿಗೆ ಸಂಗ್ರಹಿಸಿ ಸಂಘಕ್ಕೆ ಕಳುಹಿಸಿಕೊಟ್ಟರೆ ಆದರದೊಡನೆ ಸ್ವೀಕರಿಸಿ ಸದ್ಯದಲ್ಲಿಯೇ ಪ್ರಕಟಿಸಬೇಕೆಂದಿರುವ ಅವರ ಇನ್ನೊಂದು ನಾಟಕವಾದ **ಮಾಲವಿಕಾಗ್ನಿಮಿತ್ರ**ದ ಪ್ರಸ್ತಾವನೆಯೊಡನೆ ಪ್ರಸಿದ್ಧಿಸಿ ಸಂಘದ ಈ ವಿಷಯದ ಕರ್ತವ್ಯಭಾರವನ್ನು ತುಸುಮಟ್ಟಿಗಾದರೂ ಕಡಿಮೆಮಾಡಿಕೊಳ್ಳಲು ಬಯಸುವೆವು.

ಪ್ರಸ್ತುತ ಗ್ರಂಥವು ಸುಮಾರು ೪೫ ವರ್ಷಗಳ ಹಿಂದೆ ಬರೆಯಲ್ಪಟ್ಟಿತು. ಮತ್ತು ೧೪ ವರುಷಗಳವರೆಗೆ ವನವಾಸ, ಅಜ್ಞಾತವಾಸ ಕಷ್ಟಗಳನ್ನು ಅನುಭವಿಸಿ ೧೮೯೨ ನೇ ಇಸ್ವಿಯಲ್ಲಿ ಸಂಘದ ಆಶ್ರಯದಿಂದ ಪ್ರಕಟವಾಯಿತು. ಆ ಕಾಲದಲ್ಲಿ ಗ್ರಂಥಪ್ರಕಟನೆಗಿರುವ ಸಂಕಷ್ಟಗಳನ್ನೂ ಆಗಿನ ಗ್ರಂಥಕಾರರ ಕರುಣಾಜನಕವಾದ ಅವಸ್ಥೆಯನ್ನೂ ಪ್ರಥಮಮುದ್ರಣದ ಪ್ರಸ್ತಾವನೆಯಲ್ಲಿ ನೋಡಬಹುದು. ಸಂಘದ ಸ್ಥಾಪನೆಯಿಂದಲೇ ಆ ಕಾಲದ ಬರಹಗಾರರ ಇಂತಹ ಸಂಕಟಗಳು ತುಸುಮಟ್ಟಿಗೆ ಪರಿಹಾರವಾದವೆಂದು ಹೇಳಲು ಅಭಿಮಾನವೆನ್ನಿ

ಸುವದು. ಆದರೆ ಹೇಳುವದೇನಿದೆ! ಪ್ರಥಮ ಮುದ್ರಣವು ಹೊರಟು ಮೂರು ತಪಗಳ ಕಾಲವು ಸಲ್ಲುತ್ತಬಂದರೂ ದ್ವಿತೀಯ ಮುದ್ರಣಕ್ಕೆ ಅನುಕೂಲವುಂ ಟಾಗದಿರುವಾಗ ಆ ಅಭಿಮಾನವನ್ನು ಎಲ್ಲಿ ಅಡಗಿಸಿಕೊಳ್ಳಬೇಕು?

ಸಂಘದಿಂದ ಪ್ರಕಟವಾಗುತ್ತಿದ್ದ ವಾಗ್ಭೂಷಣವೂ ಅನೇಕ ಅಡಚಣಿಗಳ ಮೂಲಕ ಈಗೆರಡು ವರುಷಗಳಿಂದಲೂ ನಿಂತುಹೋಗಿರುವುದು ಎಲ್ಲರಿಗೂ ತಿಳಿದೇ ಇದೆ. ಈಗ ಅದರ ಪುನರ್ಜೀವನದ ಸಿದ್ಧತೆಯಾಗಿದೆಯೆಂದು ಬರೆ ಯುವದು ದುಃಖದಲ್ಲಿ ಸುಖದ ಮಾತು. ಇದೇ ಸಮಯದಲ್ಲಿ ಈ ದ್ವಿತೀಯ ಮುದ್ರಣವು ಹೊರಟಿರುವದರಿಂದ ವಾಗ್ಭೂಷಣದ ಚಂದಾದಾರರಿಗೆ ಈಗ ನಿಂತುಹೋಗಿರುವ ಎರಡು ಸಂಪುಟಗಳಲ್ಲಿ ಒಂದಕ್ಕೆ ಪ್ರತಿಯಾಗಿ ಇದನ್ನೂ ಇನ್ನೊಂದರ ಬದಲು ಮಾಲವಿಕಾಗ್ನಿಮಿತ್ರ ನಾಟಕವನ್ನೂ ಅರ್ಪಿಸಿಬಿಡಬೇ ಕೆಂದು ಸಂಘದ ಹಿತಾಭಿಲಾಷಿಗಳಲ್ಲಿ ಕೆಲವರು ಸೂಚಿಸಿದ್ದು ಸಯುಕ್ತಿಕವೆನಿ ಸಿತು. ಹಿಂದೆ ಇದ್ದ ಹಾಗು ಮುಂದೆ ಸ್ವೀಕರಿಸುವ ಚಂದಾದಾರರು ಇದನ್ನು ಆನಂದದಿಂದ ಸ್ವೀಕರಿಸುವರೆಂದು ನಂಬಿಗೆಯಿದೆ. ಕೆಲವು ಹಾಯಸ್ಕೂಲುಗಳ ಚಾಲಕರೂ ಈ ಉತ್ತಮ ನಾಟಕಗ್ರಂಥವನ್ನು ತಮ್ಮಲ್ಲಿ ಪಾಠಪುಸ್ತಕವಾಗಿ ಉಪಯೋಗಿಸುವೆವೆಂದೂ ಅಭಿವಚನವನ್ನಿತ್ತಿರುವರು. ಇಂತಹ ಉದಾರಾಶ್ರಯ ವನ್ನು ನಂಬಿಯೇ ಸಂಘವು ಈ ದ್ವಿತೀಯ ಮುದ್ರಣದ ಕಾರ್ಯವನ್ನು ಕೈಕೊಂ ಡಿದೆಯೆಂದು ಪುನಃ ಹೇಳಬೇಕಾಗಿಲ್ಲ.

ಧಾರವಾಡ ಕರ್ನಾಟಕ ಪ್ರಿಂಟಿಂಗ್ ವರ್ಕ್ಸದ ಒಡೆಯರಾದ ಶ್ರೀ. **ಜತ್ತಾರ ಬಳವಂತರಾಯರು** ಮುದ್ರಣಕಾರ್ಯವನ್ನು ಸಕಾಲದಲ್ಲಿ ಪೂರ್ತಿ ಗೊಳಿಸಿಕೊಡಲು ಸಮ್ಮತಿಸಿದ್ದರಿಂದಲೂ ಸಂಘದ ಹಿತಚಿಂತಕರಲ್ಲೊಬ್ಬರಾದ ಶ್ರೀ. **ನಾರಾಯಣ ವೆಂಕಟೇಶ ಕುರಡಿಯವರು** ಮುದ್ರಣದೋಷಗಳನ್ನು ತಿದ್ದಿಕೊಡಲು ಒಪ್ಪಿಕೊಂಡದ್ದರಿಂದಲೂ ಕಾರ್ಯವು ಸುಲಭವಾಗಿ ಸಾಂಗವಾ ಗಲು ಅನುಕೂಲವಾಯಿತು. ತಮಗಿರುವ ಅನೇಕ ತೊಂದರೆಗಳನ್ನೆಲ್ಲ ಸಹಿಸಿ ಕೊಂಡು ಅವಸರಕ್ಕೆ ಒದಗಿ ಪ್ರೂಫುಗಳನ್ನು ತಿದ್ದಿಕೊಟ್ಟ ಶ್ರೀ ಕುರಡಿಯವರಿಗೆ ಸಂಘವು ತುಂಬಾ ಋಣಿಯಾಗಿರುವದು. ಈ ಸುಮಾರು ೧೫೦ ಪುಟಗಳ ಪುಸ್ತಕವನ್ನು ತೀರಸ್ವಲ್ಪಕಾಲದಲ್ಲಿ ಮುದ್ರಿಸಬೇಕಾಗಿ ಬಂದಿರುವದರಿಂದ ಒಂದೆ ರಡು ಅಚ್ಚಿನ ದೋಷಗಳು ಕಣ್ಣುತಪ್ಪಿ ಉಳಿದಿದ್ದರೆ ವಾಚಕರು ಕ್ಷಮಿಸುವ ರೆಂದು ನಂಬಿರುವೆವು.

ಕೊನೆಗೆ ಶ್ರೀಹರಿಯ ಪ್ರೇರಣೆಯಿಂದ ತುಸು ದಿವಸಗಳಲ್ಲಿಯೇ ಇದರ ಮೂರನೆಯ ಮುದ್ರಣವನ್ನು ಪ್ರಕಟಿಸುವ ಸಕಲಜನಾನಂದಕರವಾದ ಸುಯೋಗವು ಒದಗಿಬರಲೆಂದು ಪ್ರಾರ್ಥಿಸಿ ಇಲ್ಲಿಗೆ ವಿರಮಿಸುವೆವು.

ಕ. ವಿ. ವ. ಸಂಘ,
ಧಾರವಾಡ.
ತಾ|| ೧೪-೭-೧೯೨೪.

ಜಿ. ಜಿ. ಹಳಕಟ್ಟಿ,
ಕೆ. ಪಿ. ಕಾಲೀಕರ,
ಗೌರವಕಾರ್ಯದರ್ಶಿಗಳು.



# ಅನುಕ್ರಮಣಿಕೆ.





# ಉತ್ತರರಾಮಚರಿತ್ರ ನಾಟಕವು.

## ೧ನೇ ಅಂಕವು.

---

॥ ಮಂಗಳಾಚರಣದ ಅಷ್ಟಪದಿಯು. ॥

ಶ್ರೀವರ ಶೌರೀ ಜಯಮುರವೈರೀ ಜಯಮಂಗಳಕರ ದೇವಾ ॥
ಪಾವನಶೀಲಾ, ಜಯ ನತಪಾಲಾ ಜಯ ಮುನಿಜನಕೃತಸೇವಾ ॥ ೧ ॥
ಶ್ರೀವನಮಾಲೀ ಕರುಣಾಶಾಲೀ ವೃಂದಾವನಕೃತಕೇಳೀ ॥
ಗೋವ್ರಜಧೂಳೀ ಶೋಣಕಪೋಲೀ ಜಯತು ಜಯತು! ಕಮಲಾಳೀ ॥ ೨ ॥
ಜಯ ಜನರಂಜನ ಜಯ ಖರಭಂಜನ ಜಯ ಜಯ ಕುಂಜವಿಲಾಸಿ ॥
ಜಯ ಪೀತಾಂಬರ ಜಯ ಕೌಸ್ತುಭಧರ ಭಜಕಾನಂದ ವಿಕಾಸಿ ॥ ೩ ॥
ಕರುಣಾಪಾಂಗಾ ಗರುಡತುರಂಗಾ ನತಿಯೋ ನತಿ! ಜಯ ರಂಗಾ ॥
ಹರಿಕೃಪೆಯಿಂದಾ ಕಡೆಗಣಿಂದಾದರಿಸಿ ನೋಡೊ! ಭವಭಂಗಾ ॥ ೪ ॥
ಕಮಲನಿವಾಸಿನಿ, ತ್ರಿಭುವನಜನನೀ ಹರಿವಕ್ಷಃಸ್ಥಳಭೂಷೆ ।
ರಮಣಮನೋನುಕ್ರಮಣಿಕೆ ನೀನು ಮೃದುಮಂಜುಳಮಿತಭಾಷೆ ॥ ೫ ॥
ಸಾಗರಕನ್ಯೇ ತ್ರಿಭುವನಮಾನ್ಯೇ, ಜಯ ಜಯ ಜಲರುಹಪಾಣಿ ॥
ಭೋಗಿಪಶಯನೇ ಜಯ ಮೃಗನಯನೇ ವಿಷ್ಣುಪತ್ನಿ ಕಲ್ಯಾಣಿ ॥ ೬ ॥
ಪಾಪಿಯ ಮೇಲೆ ಶ್ರೀಪತಿ, ಕಮಲೇ ಕೋಪಿಸಿಹನು ಬಃಂತಾಯೇ ॥
ಆ ಪಿತನಂತೇ ಕೋಪಿಸದಂತೇ ಕರುಣದಿ ಬೋಧಿಸಿ ಕಾಯೆ ॥ ೭ ॥
ಇಂದಿರೆ, ಎನ್ನೀವಂದನೆ ನಿನ್ನೀ ಸುಂದರ ಪದಯುಗದಲ್ಲೀ ॥
ಮಂದಮತಿಯ ಕಡೆಗೊಂದಿನಿತೀಕ್ಷಿಸು ಮಂದಹಾಸಮಂ ಚೆಲ್ಲಿ ॥ ೮ ॥

॥ ವಸಂತತಿಲಕಾವೃತ್ತಂ ॥

ಶ್ರೀಜಾನಕೀಶನಡಿಗಳ್ಗಭಿವಂದಿಸುತ್ತುಂ ।
ತೇಜೋನೃಸಿಂಹಗುರುವಂ ಸ್ಮರಿಸುತ್ತೆ ಮತ್ತುಂ ॥
ಆ ಜಾಣಗಾದಿಕವಿಗಂಜಲಿಯೆತ್ತಿ ಪೇಳ್ವೆಂ ।
ರಾಜೇಂದ್ರ ರಾಮ.ಚರಿತೋತ್ತರಭಾಗವನ್ನು ॥ ೧ ॥

॥ ಭಾಮಿನಿಷಟ್ಪದಿಯು ॥

ವರಪುರಾತನ ಕವಿಗಳಡಿಸಾ ।
ವಿರಿಗಳಿಗೆ ಕೈಮುಗಿದು ಬೇಡುವೆ ।
ವಿರಲಿನಮಗಾಸುಕೃತಿಗಳದಯೆಯಿಂದೆ ವಾಗ್ದೇವಿ ॥
ಪರಮಪುರುಷಾಂಶಸ್ವರೂಪಿಣಿ ।
ನಿರತಿಶಯ ತೃಪ್ತಿಪ್ರದೆಯು ಸ ।
ಚ್ಚರಿತೆ ಕಲ್ಯಾಣಿ ಪ್ರಸನ್ನೆ ಮುಖಾರವಿಂದದಲಿ ॥ ೧ ॥

( ಹೀಗೆ ಮಂಗಲಾಚರಣವಾದ ಬಳಿಕ ಸೂತ್ರಧಾರಕನು ಬರುತ್ತಾನೆ. )

ಸೂತ್ರಧಾರಕನು— ಸಾಕು ಸಾಕು! ಅತಿ ವಿಸ್ತರವು ಸಾಕು. ಈವೊತ್ತು ಶ್ರೀಮನ್ಮಹಾಕಾಲೇಶ್ವರನ ಯಾತ್ರೆಗಾಗಿ ಕೂಡಿವ ರಸಿಕ ಶ್ರೇಷ್ಠರಿಗೆ ನಾನು ಬಿನ್ನವಿಸುತ್ತೇನೆ. ಅವರು ದಯಮಾಡಿ ನನ್ನ ಬಿನ್ನಹಕ್ಕೆ ಚಿತ್ತ ಕೊಡಲಿ. ಪೂಜ್ಯನಾದಂಥ, ಕಾಶ್ಯಪ ಗೋತ್ರದಲ್ಲಿ ಹುಟ್ಟಿದಂಥ, ಶ್ರೀಕಂಠನೆಂಬ ಬೇರೆ ಹೆಸರುಳ್ಳಂಥ, ಭವಭೂತಿಯೆಂಬ ಕವಿಯು ಹೆಸರಾಗಿದ್ದಾನೆ; ಇದನ್ನು ಸಭಾಸದರು ತಿಳಿದವರಾಗಿರ ಬಹುದು:—

॥ ವಸಂತತಿಲಕಾ ॥

ಆ ವಿಪ್ರವರ್ಯನಿಗೆ ಮೆಚ್ಚಿದ ಚೆಲ್ವೆಯಂತೀ ।
ಶ್ರೀವಾಣಿ ಕೂರ್ತು ಕುಣಿವುತ್ತಿಹಳಾತನಿಂದೇ ॥
ಶ್ರೀವೀರರಾಮಚರಿತಂ ರಚಿತಂ ಸುರಮ್ಯಂ ।
ನಾವಾ ಸುನಾಟಕವನಾಡಿಯೆ ತೋರ್ಪೆವೀಗಳ್ ॥ ೨ ॥

ಆದದರಿಂದ ದಯಮಾಡಿ ಇತ್ತಕಡೆಗೆ ಲಕ್ಷ್ಯಕೊಡಬೇಕು.

ಈಗ ನಾನು ಅಯೋಧ್ಯೆಯಲ್ಲಿರುವವನೂ, ಆಗಿನಕಾಲದವನೂ, ಆಗಿದ್ದೇನೆ. ( ಹೀಗೆಂದು ಎಲ್ಲಾ ಕಡೆಗೆ ನೋಡಿ ) ಎಲ ಎಲಾ!! ಇದು.. ರಾಕ್ಷಸ ಕುಲ ಸಂಹಾರಕನಾದಂಥ, ಮಹಾರಾಜ ರಾಮಚಂದ್ರನ ಪಟ್ಟಾಭಿಷೇಕದ ಕಾಲವು. ಹಗಲಿರುಳು ಒಂದೇಸವನೆ ಮಂಗಳೋತ್ಸವಗಳ ಸಮಾರಂಭವಿರಬೇಕು; ಆದರೆ ರಂಗಭೂಮಿಯು ನಟನರ್ತಕಿ ಮುಂತಾದವರ ಸದ್ದಿಲ್ಲದ್ದಾಗಿದೆ, ಇದೇನು?

ನಟನು—( ಪ್ರವೇಶಮಾಡಿ ) ಎಲೈ! ಭರತಕುಲದೊಡೆಯಾ! ನಿನಗೆ ಗೊತ್ತಿಲ್ಲವೇ? ಲಂಕೆಯ ಕಾಳಗದಲ್ಲಿ ಗೆಳೆಯರಾದ ಕಡುಮಹಿಮೆಯುಳ್ಳ ಕಪಿರಾಕ್ಷ

ಸರೂ, ನಾನಾ ದೇಶಗಳಲ್ಲಿರುವ ಬ್ರಹ್ಮರ್ಷಿಗಳೂ, ರಾಜರ್ಷಿಗಳೂ ಪಟ್ಟಾಭಿಷೇಕದ ಸಮಾರಂಭಕ್ಕಾಗಿ ಬಂದಿದ್ದರು. ಅವರ ಮನ್ನಣೆಗೋಸ್ಕರ ಇಷ್ಟು ದಿವಸಗಳವರೆಗೆ ಉತ್ಸವವಿತ್ತು; ಈಗ ಅವರನ್ನು ದೊರೆಗಳು ಅವರವರ ಊರುಗಳಿಗೆ ಇಲ್ಲಿಂದ ಕಳುಹಿಬಿಟ್ಟರು; ಇನ್ನು ಹ್ಯಾಗೆ ನಟನರ್ತಕಿಯರ ಸಪ್ಪು ಇದ್ದೀತು!

ಸೂತ್ರಧಾರನು— ಹೌದು! ನಿಜವು. ಮತ್ತೊಂದೇನಂದರೆ:—

॥ ಆರ್ಯಾ ॥

ಜಾಮಾತೃವಿನಾಶ್ರಮಕಾ ।
ರಾಮು ಜನನಿಯರ್ ಮುಖಾವಲೋಕನವಂ ॥
ಕಾಮಿಸಿ ಪೋದರರುಂಧತಿ ।
ತಾ ಮುಂದಿರ್ದಳ್ ಮಹರ್ಷಿಕರೆದೊಯ್ದಂ ॥ ೩ ॥

ನಟನು— ನಾನು ಬೇರೆ ನಾಡಿನವನು, ಗೊತ್ತಿಲ್ಲದ್ದರಿಂದ ಕೇಳುತ್ತೇನೆ; ನೀವು ಜಾಮಾತನೆಂದಿರಲ್ಲಾ? ಅವರು ಯಾರು?

ಸೂತ್ರ— ಹಾಗಾದರೆ ಕೇಳು.

ಶಾಂತಾಕುಮಾರಿ ಮೊದಲೀದಶದಿಗ್ರಥೋರ್ವೀ ।
ಕಾಂತಂಗೆ ಪುಟ್ಟಿದಳು ಭೂವರನಾಕಿಯನ್ನು ॥
ಸಂತೋಷದಿಂದಿವಳು ಧರ್ಮದ ಪುತ್ರಿ ನಿಂಗೋ ।
ವಿಾತೆಂದು ಕೊಟ್ಟರಲು ಲೋಮಪದೋರ್ವಿಪಂಗೆ ॥ ೪ ॥

ಆಕೆಯನ್ನು ವಿಭಾಂಡಕನ ಮಗನಾದ ಋಷ್ಯಶೃಂಗನು ಮದುವೆಯಾದನು; ಆತನೇ ಈಗ ದ್ವಾದಶವಾರ್ಷಿಕಯಾಗವನ್ನಾರಂಭಿಸಿದ್ದಾನೆ; ಆತನ ಔತಣದಿಂದ ಗುರುಜನರು ತುಂಬಿದ ಬಸುರುಳ್ಳ ಜಾನಕಿಯನ್ನು ಬಿಟ್ಟು ಅಲ್ಲಿಗೆ ಹೋಗಿರುತ್ತಾರೆ. ಒಳ್ಳೇದು, ಈ ವಿಚಾರಗಳಿಂದ ನಮಗೇನು? ನಮ್ಮ ಕುಲದ ನಡತೆಯ ಮೇರೆಗೆ ಅರಮನೆಯನ್ನು ಪ್ರವೇಶಿಸಿ ದೊರೆಗಳನ್ನು ಕೊಂಡಾಡತಕ್ಕದ್ದದೆ. ನಡಿ, ಹೋಗೋಣ,

ನಟನು—ಹಾಗಾದರೆ ಭರತಶಾಸ್ತ್ರದಲ್ಲಿ ಪ್ರವೀಣರಾದ ತಾವೇ ರಾಜಸೇವೆಗೆ ತಕ್ಕದ್ದೂ, ಶುದ್ಧವೂ ಆದ ಸ್ತುತಿ ಗೀತೆಯನ್ನು ಹೇಳಿಕೊಡಬೇಕು.

ಸೂ—ಎಲೈ ಕೇಳು.

॥ ಆರ್ಯಾ ॥

ಶೋಕದನಪವಾದವಂ ವ್ಯವ ।
ಹಾರದೊಳೆಲ್ಲಂದದಿಂದೆ ನೋಡಿದೊಡೆ ॥
ನಾರಿಯುರೊಳ್ಪಂ ಕುಜನರ್ ।
ದೂರುವರಾಪರಿ ಸದುಕ್ತಿಯುಂ ಪಳಿವರ್ ॥ ೫ ॥

ನಟ—ಅವರಿಗೆ ಅತಿಕುಜನರೆಂದೆನ್ನತಕ್ಕದ್ದು; ಯಾಕಂದರೆ—

ತ್ರೈಲೋಕ್ಯಮಾತೆಯೊಳು ರಾಘವ ರಾಣಿಯಲ್ಲಿ ।
ಈ ಲೋಕಮಿಟ್ಟುದಪವಾದವನಿಂತಿದಕ್ಕೆ ॥
ಮೂಲಂ ಸುರಾರಿಗೃಹವಾಸವು ಸತ್ಯವಂತೆ ।
ಜ್ವಾಲಾಗ್ನಿನಲ್ಲಿ ಪರಿಶುದ್ಧಿಯಸತ್ಯವಂತೆ ॥ ೬ ॥

ಸೂ—ಈ ಸುದ್ದಿಯು ರಾಜಾಧಿರಾಜನಾದ ರಾಮಚಂದ್ರನ ಕಿವಿಗೆ ಮುಟ್ಟಿದರೆ ಅತಿಕಷ್ಟವಾದೀತೆಂದು ತೋರುತ್ತದೆ.

ನಟ—ಆದರೂ ಋಷಿಗಳೂ, ದೇವತೆಗಳೂ, ಹ್ಯಾಗಾದರೂ ಕಲ್ಯಾಣವನ್ನು ಉಂಟುಮಾಡ್ಯಾರು (ಅತ್ತಿತ್ತ ತಿರುಗಾಡುತ್ತಾ) ಎಲೈ! ಈ ವೇಳೆಗೆ ದೊರೆಗಳು ಎಲ್ಲಿದ್ದಾರಾದೀತು? (ಹೀಗೆಂದು ಕಿವಿಗೊಟ್ಟು ಕೇಳಿ) ಜನರು ಹೀಗನ್ನುತ್ತಾರೆ.

ಸೀತಾರಾಮರ ಸಂತಸಂ ಬಡಿಸಲೆಂದಾ ಮೈಥಿಲಂ ಪ್ರೀತಿಯಿಂ ।
ದೈತಂದಿನ್ನೆಗಮಿರ್ದನುತ್ಸವಗಳಿಂದೀವೊತ್ತು ಸ್ವಸ್ಥಾನಕೆ ॥
ಆತಂಪೋದುದರಿಂದ ಖಿನ್ನಮುಖಿಯಾದಾದೇವಿಯಂ ಮೇದಿನೀ ।
ನಾಥಂ ಸಂತವಿಸಲ್ಕೆ ರಾಜಸಭೆಯಿಂದಂತಃಪುರಕ್ಕೈದುತಂ ॥ ೭ ॥

( ಹೀಗೆ ಮಾತುಗಳನ್ನಾಡಿ ಅವರಿಬ್ಬರು ಹೊರಟು ಹೋಗುತ್ತಾರೆ. )

(ಇದು ಮುಂದಿನ ಕಥೆಯ ಪ್ರಸ್ಥಾವನೆಯು.)

( ಆ ಬಳಿಕ ಆಸನದಲ್ಲಿ ಕೂತ ರಾಮನೂ ಸೀತೆಯೂ ಬರುತ್ತಾರೆ )

ರಾ—ಎಲೈ ದೇವೀ ಜಾನಕೀ, ತಾಳು. ಆ ನಮ್ಮ ಹಿರಿಯರಾದರೂ ನಮ್ಮನ್ನು ಬಿಟ್ಟು ಹೋಗಲಿಕ್ಕೆ ಬಯಸಿದವರಲ್ಲ; ಆದರೆ—

॥ ಆರ್ಯಾ ॥

ಇಹುದಿಲ್ಲಂ ಸ್ವಾತಂತ್ರ್ಯಂ ।
ವಿಹಿತಾನುಷ್ಠಾನಮಂ ವಹಿಸಿದರ್ಗೆ ॥

ಬಹುವಿಘ್ನದುಷ್ಕರಂಗಳ್ ।
ಗೃಹಸಧರ್ಮಂಗಳಗ್ನಿಹೋತ್ರಿಗಳಾ ॥ ೯ ॥

ಜಾ—ಬಲ್ಲೆನು, ಆರ್ಯಪುತ್ರರೇ, ಇದನ್ನು ನಾನು ಬಲ್ಲೆನು, ಆದರೆ ಏನು ಮಾಡಲಿ ? ಬಾಂಧವರ ಅಗಲುವಿಕೆಯು ಸಂತಾಪಕಾರಕವಾಗಿದೆ; ಆದ ದರಿಂದ ಮನಸಿಗೆ ಸಮಾಧಾನವಾಗಲೊಲ್ಲದು.

ರಾ—ಹೌದು! ಹೀಗೇ ಸಂಸಾರದ ಪರಿಣಾಮಗಳು ಹೃದಯಮರ್ಮ ವನ್ನು ಕತ್ತರಿಸುವಂಥವಾಗಿವೆ; ಅವುಗಳಿಂದ ನಿರ್ವಿಣ್ಣರಾಗಿ ಬುದ್ಧಿಶಾಲಿಗಳು ಎಲ್ಲಾ ಆಶೆಗಳನ್ನು ಬಿಟ್ಟು ವನವಾಸದಲ್ಲಿದ್ದು ವಿಶ್ರಾಂತಿಯನ್ನು ಹೊಂದುವರು. (ಇಷ್ಟರಲ್ಲಿ ಕಂಚುಕಿಯು ಬರುತ್ತಾನೆ).

ಕಂ—ರಾಮಭದ್ರಾ (ಹೀಗೆ ಅರೆ ಮಾತಾಡಿ ಅಂಜಿಕೊಂಡು) ಎಲೈ ರಾಜಾಧಿ ರಾಜಾ ?

ರಾ—(ಮುಗುಳುನಗೆಯಿಂದ) ನಮ್ಮ ಹಿರಿಯರ ಸೇವಕ ಜನರು ನನ್ನನ್ನು ರಾಮಭದ್ರನೆಂದೇ ಕರಿಯತಕ್ಕದ್ದು. ಇದೇ ನನಗೆ ಒಪ್ಪುತ್ತದೆ; ಮನಸಿನಲ್ಲಿ ಸಂದೇಹ ಪಡುವ ಕಾರಣವಿಲ್ಲ.

ಕಂ—ದೊರೆಯೇ ರುಷ್ಯಶೃಂಗರ ಆಶ್ರಮದಿಂದ ಅಷ್ಟಾವಕ್ರಮುನಿಗಳು ಬಂದಿದ್ದಾರೆ.

ಜಾ—ಆರ್ಯಪುತ್ರರೆ, ಏನು ಕಾರಣ ಅವರನ್ನು ಒಳಗೆ ಬಿಡಲಿಕ್ಕೆ ತಡ ವಾಗುತ್ತದೆ ?

ರಾ—ಎಲೈ ! ಅವರನ್ನು ಬೇಗನೆ ಒಳಗೆ ಕಳುಹಿಸಿರಿ !

ಕಂ—ಮಹಾಪ್ರಸಾದ–(ಎಂದು ಹೊರಟು ಹೋಗುತ್ತಾನೆ)

ಅಷ್ಟಾವಕ್ರನು— (ಒಳಗೆ ಹೋಗಿ) ನಿಮಗೆ ಕಲ್ಯಾಣವಾಗಲಿ ! (ಎಂದು ಹರಸುತ್ತಾನೆ).

ರಾ—ಸ್ವಾಮಿಾ, ಅಭಿವಂದಿಸುತ್ತೇನೆ, ಈ ಆಸನದಲ್ಲಿ ಕುಳ್ಳಿರಬೇಕು.

ಜಾ—ಸ್ವಾಮಿಾ, ತಮ್ಮ ಅಡಿದಾವರೆಗಳಿಗೆ ನನ್ನ ನಮಸ್ಕಾರವು. ಅಳಿ ಯರಿಂದ ಕೂಡಿದ ನಮ್ಮ ಗುರುಜನರೆಲ್ಲಾ ನೆಟ್ಟಗಿದ್ದಾರೇ ? ನಮ್ಮತ್ತಿಗೆ ಶಾಂತಾದೇವಿಯರಿಗೆ ಕ್ಷೇಮವೇ ?

ರಾ— ಮಹಾತ್ಮರಾದ ರುಷ್ಯಶೃಂಗಭಾವನವರು ಕ್ಷೇಮದಲ್ಲಿದ್ದಾರೇ ? ಅವರ ಯಾಗಾನುಷ್ಠಾನಗಳು ಚನ್ನಾಗಿ ಸಾಗುತ್ತವೋ ? ಅಕ್ಕ ಶಾಂತಾದೇವಿ ಯರಿಗೆ ಕುಶಲವೇ ? ಮತ್ತೂ ಅವರು ಪತಿಸೇವಾಸಕ್ತರಾಗಿ ಇರುತ್ತಾರಷ್ಟೆ ?

ಜಾ—ಅವರು ನಮ್ಮನ್ನು ನೆನಿಸುವರೇ ?

ಅಷ್ಟಾವಕ್ರನು—( ಕೌತುಕಗೊಂಡು ) ಏನಾಶ್ಚರ್ಯವು ? ಯಾವಾಗಲೂ ನಿಮ್ಮನ್ನು ನೆನಿಸುತ್ತಾರೆ; ಹಾಗು ದೇವೀ ಜಾನಕೀ , ನಿಮ್ಮ ಕುಲಗುರುಗಳೆನಿಸುವ ವಶಿಷ್ಠರು ನಿನಗೆ ಹೇಳಿದ್ದೇನಂದರೆ:—

ಮಾತೃಸ್ಥಳಂ ನಿನಗೆ ಜಾನಕಿ ಭೂಮಿದೇವಿ ।
ತಾತಂ ನರೇಂದ್ರಜನಕಂ ಪರಮೇಷ್ಠಿಸಾಮ್ಯಂ ॥
ಜ್ಯೋತಿರ್ಮಯಂ ಗುರು ವಶಿಷ್ಠನುಮಾರ್ಗೆನೀನಾ ।
ಖ್ಯಾತಾವನೀಂದ್ರರ ವಧೂಮಣಿರಾಮಪತ್ನಿ ॥ ೯ ॥

ಇದಕ್ಕೂ ಹೆಚ್ಚಿನ ಇನ್ನಾವ ವೈಭವದ ಹರಕೆಯನ್ನು ನಿನಗೆ ಕೊಡಬೇಕು? ನೀನು ನಿನ್ನ ವೀರಕುಮಾರರನ್ನು ಎತ್ತಿಕೊಂಡ ಪ್ರಮೋದೋತ್ಸವವನ್ನು ನೋಡಿ, ಸಂತೋಷಪಡಬೇಕೆಂಬದನ್ನಿಷ್ಟೇ ನಾವು ಬಯಸುತ್ತೇವೆ.

ರಾ—ಇದು ಅವರ ಬಯಕೆಯಲ್ಲ , ನಮ್ಮ ಮೇಲೆ ಅನುಗ್ರಹವೇ ಆಯಿತು, ಯಾಕಂದರೆ:—

॥ ಆರ್ಯಾ ॥

ಲೌಕಿಕಸಾಧುಗಳುಕ್ತಿಯು ।
ದಾಕಾಂಕ್ಷಿಪುದರ್ಥವಂ ಪುರಾತನರಾ ॥
ಶ್ರೀಕರಭಾರತಿಯಂ ತಾ ।
ನೇ ಕಾಂಕ್ಷಿಪುದರ್ಥಮೆಂದೆ ಮುನಿಜನರಾ ॥ ೧೦ ॥

ಅಷ್ಟಾ—ಮತ್ತು ಎಲೈ ಅರಸೇ, ಅರುಂಧತಿಯೂ, ನಿಮ್ಮ ತಾಯಂದಿರೂ, ಶಾಂತಾದೇವಿಯೂ ಬಹಳ ಸಾರೆ ಹೇಳಿದ್ದೇನಂದರೆ:—ಜಾನಕಿಯು ಬಸುರಿದ್ದಾಳೆ; ಆದದರಿಂದ ಆಕಿಗೆ ಏನಾದರೂ ಬಯಕೆಯಾದರೆ ಅದನ್ನು ಕೂಡಲೆ ಅವಶ್ಯವಾಗಿ ಪೂರ್ಣಮಾಡಬೇಕು.

ರಾ—( ಹರ್ಷಿತನಾಗಿ ನಸುನಕ್ಕು ) ಈಕೆ ಏನೇನು ಹೇಳುತ್ತಾಳೋ ಅದೆಲ್ಲಾ ಆಗಲೇ ನನ್ನಿಂದ ಪೂರ್ಣ ಮಾಡಿಸಲ್ಪಡುತ್ತದೆ.

ಅಷ್ಟಾ—ಎಲೈ ತಾಯಿಯೇ, ಸೀತೆ, ನಿಮ್ಮ ಭಾವಂದಿರಾದ ರುಷ್ಯಶೃಂಗರು ಹೇಳಿದ್ದೇನಂದರೆ:—ಮಗಳೇ, ನಿನ್ನನ್ನು ತುಂಬಿದ ಬಸುರಿನವಳೆಂದು ಇಲ್ಲಿಗೆ ಕರಿಸಲಿಲ್ಲ. ಇದಕ್ಕೆ ನೀನು ಖಿನ್ನೆಯಾಗಬಾರದು. ನಿನ್ನ ಮಾನಸಿನ ಸಮಾಧಾನ

ಕ್ಕಾಗಿಯೇ ಶ್ರೀರಾಮನನ್ನು ಅಲ್ಲಿ ಬಿಟ್ಟೆವು. ನೀನು ಮಕ್ಕಳನ್ನು ತೊಡೆಯ ಮೇಲೆ ಆಡಿಸುವದನ್ನು ನಾವು ನೋಡುವೆವು.

ರಾ— ( ನಕ್ಕು ) ಹಾಗೇ ಆಗಲಿ; ಎಲೈ ಮುನಿಯೇ ! ವಶಿಷ್ಠ ಗುರು ಗಳು ನನಗೆ ಮತ್ತೇನಾದರೂ ಅಪ್ಪಣೆಯನ್ನು ಹೇಳಿರುವರೋ ಹ್ಯಾಗೆ ?

ಅಷ್ಟಾ—ಹೌದು ಹೇಳಿದ್ದಾರೆ, ಕೇಳಬೇಕು.

॥ ಇಂದ್ರವಜ್ರಾವೃತ್ತಂ ॥

ಜಾಮಾತೃಯಾಗಕ್ಕೊಳಗಾದೆವಾವ್ಕೆ ।
ರಾಮಾ, ನವಂ ರಾಜ್ಯವು ಚಿಕ್ಕವಂ ನೀಂ ॥
ಭೂಮಿ ಪ್ರಜಾರಂಜಕನಾಗು ಕೇಳ್ ನೀ ।
ಸೀಮಂ ಯಶೋಭಾಗ್ಯವು ಬರ್ಪುದಲ್ಲಿಂ ॥ ೧೧ ॥

ರಾ—ಒಳ್ಳೇದು, ವಶಿಷ್ಠರು ಹೇಳಿದಂತೆ ನಡಿಯುತ್ತೇನೆ.

॥ ವಸಂತತಿಲಕಾ ॥

ಕಾರುಣ್ಯಮಂ ಸ್ನೇಹವ ಸೌಖ್ಯಮಂ ಮೇ ।
ಣೀ ರಾಮನೀ ಸೀತೆಯುಮಂ ಬಿಡಲ್ಕೆ ॥
ಕೋರುತ್ತಿಹಂ ನಿಶ್ಚಯದಿಂ ಪ್ರಜಾಚಿ ।
ತ್ತಾರಾಧನಾರ್ಥಂ ವ್ಯಥೆಯಿಲ್ಲವಂಗೆ ॥ ೧೨ ॥

ಜಾ—ಆದದರಿಂದಲೇ ಆರ್ಯಪುತ್ರರು ರಘುಕುಲದಲ್ಲಿ ಧುರಂಧರರೆಂದು ಹೆಸರಾಗಿದ್ದೀರಿ.

ರಾ—ಎಲೈ ಯಾರಿದ್ದೀರಲ್ಲಿ ? ಈ ಅಷ್ಟಾವಕ್ರಮುನಿಗಳಿಗೆ ವಿಶ್ರಾಂತಿಯಾ ಗುವಂತೆ ಚನ್ನಾಗಿ ಆದರಿಸಲಿಕ್ಕೆ ಎಚ್ಚರಾಗಿರಿ.

ಅಷ್ಟಾ—ದೊರೆಯೇ ! ಇನ್ನು ನಾವು ಹೋಗಿ ಬರುತ್ತೇವೆ. ( ಹೀಗೆಂದು ಅತ್ತಿತ್ತ ನೋಡಿ ) ಕುಮಾರ ಲಕ್ಷ್ಮಣನು ಬಂದನು ( ಎಂದು ಹೊರಟು ಹೋದರು ).

ಲಕ್ಷ್ಮಣನು—ಅಣ್ಣಾ ಜಯಜಯ! ತಮಗೆ ಜಯವಿರಲಿ! ತಮ್ಮ ಅಪ್ಪಣೇ ಮೇರೆಗೆ ಚಿತ್ರಗಾರನು ಈ ಪಟದಲ್ಲಿ ತಮ್ಮ ಚರಿತ್ರವನ್ನು ಚಿತ್ರರೂಪದಿಂದ ಬರೆದು ತಂದಿದ್ದಾನೆ. ಇದನ್ನು ನೋಡಬೇಕು.

ರಾ—ಶಾಬಾಸ್ ಲಕ್ಷ್ಮಣಾ ! ಇದನ್ನು ನೀನು ಒಳ್ಳೇ ಹೊತ್ತಿಗೆ ತಂದಿ; ಅಸ್ವಸ್ಥೆಯಾದ ದೇವಿಯನ್ನು ವಿನೋದ ಪಡಿಸಲಿಕ್ಕೆ ನೀನು ಒಳ್ಳೇ ಉಪಾಯ

ವನ್ನು ಮಾಡಿದಿ; ತಾ, ನೋಡೋಣ. ಚಿತ್ರವು ಎಲ್ಲಿಯವರೆಗೆ ಬರಿಯ ಲ್ಪಟ್ಟಿದೆ ?

ಲಕ್ಷ್ಮ—ಅಗ್ನಿಮುಖದಿಂದ ದೇವಿಯರು ಶುದ್ಧರೆಂದು ಲೋಕಕ್ಕೆ ತಿಳಿಸ ಲ್ಪಟ್ಟರಲ್ಲ ? ಅಲ್ಲಿಯ ವರೆಗೆ.

ರಾ—(ಉದಾಸೀನನಾಗಿ) ಸಾಕು ! ತಮ್ಮಾ ಒಳಿತನ್ನು.

ಈ ಸೀತೆ ಶುದ್ಧಾತ್ಮಳು ಜನ್ಮದಿಂದೇ ।
ಆಶುದ್ಧಿಗಳ್ ಮಾಡುವದೇನಿವಳ್ಗೆ ॥
ಆ ಸೇವ್ಯ ತೀರ್ಥೋದಕವುಗ್ನಿಯುಂ ತಾ ।
ವೇ ಶುದ್ಧಗಳ್ ಶುದ್ಧಿಗಳಿಲ್ಲವಕ್ಕೆ ॥ ೧೩ ॥

ಲಕ್ಷ್ಮ—ಎಲೈ ತಾಯಿ ಸೀತೆ, ದೇವಯಜನದಿಂದ ಹುಟ್ಟಿದವಳೇ, ಪ್ರಸ ನ್ನಳಾಗು, ನನ್ನ ಪ್ರಣಾಮವು ಜನ್ಮವಿರುವತನಕ ನಿನ್ನ ಪಾದಗಳಿಗೆ ಇರಲಿ,

ರಾ—

॥ ವಸಂತತಿಲಕಾ ॥

ಶುದ್ಧಾನ್ವಯರ್ಗೆ ಜನರುಜನೆ ಕಷ್ಟಕಾರ್ಯಂ ।
ಹೃದ್ದಾಹಕಂ ನಿನಗಯೋಗ್ಯಮಿದೆಮ್ಮ ವಾಕ್ಯಂ ॥
ಸಿದ್ಧಂ ಸುಗಂಧಿಕುಸುಮಕ್ಕೆ ಶಿರೋಗ್ರವಾಸಂ
ತದ್ಧರ್ಮವೊಂದು; ಚರಣಾಹತಿಯುಪ್ರಸಿದ್ಧಂ ॥ ೧೪ ॥

ಸೀ— ಇರಲಿ, ಪ್ರಾಣದೊಡೆಯರೇ, ಆ ಮಾತು ಹಾಗಿರಲಿ. ತಮ್ಮ ಚರಿತ್ರದ ಚಿತ್ರವನ್ನು ಹ್ಯಾಗೆ ಬರೆದಿದ್ದಾನೋ, ನೋಡೋಣ. (ಎಂದು ಮುಂದಕ್ಕೆ ಸರಿಯುತ್ತಾಳೆ.)

ಲಕ್ಷ್ಮ—ಇದೇ ಚಿತ್ರಪಠವು, ನೋಡಬೇಕು.

ಸೀ—(ದಿಟ್ಟಿಸಿ ನೋಡಿ) ಈ ಚಿತ್ರದ ಮೇಲ್ಭಾಗದಲ್ಲಿ ತೋರಿಸಲ್ಪಟ್ಟಂಥ ವರು ಯಾರು ? ನಮ್ಮ ಪ್ರಾಣದೊಡೆಯರನ್ನು ಕೊಂಡಾಡುತ್ತಾರೆಂಬಂತೆ ತೋರುತ್ತದೆ.

ಲಕ್ಷ್ಮ—ದೇವೀ ಜಾನಕೀ, ಇವು ಗುಪ್ತವಾಗಿರತಕ್ಕ ಮಂತ್ರಸಿದ್ಧಗಳಾದ ಜೃಂಭಕಾಸ್ತ್ರಗಳು; ಮೊದಲು ಶ್ರೀಮನ್ಮಹಾಕೃಶಾಶ್ವಮುನಿಗಳಿಂದ ವಿಶ್ವಾಮಿತ್ರ

ಗುರುಗಳಿಗೆ ದೊರೆದವು. ಅವರು ನಮ್ಮಣ್ಣನಿಗೆ ತಾಟಕೆಯನ್ನು ಕೊಂದದ್ದ ರಿಂದ ಮೆಚ್ಚಿ ಕೊಟ್ಟರು.

ರಾ—ದೇವಿ, ದಿವ್ಯಾಸ್ತ್ರಗಳಿಗೆ ನಮಸ್ಕರಿಸು. ಇವು ಸರ್ವಸಾಧಾರಣಗ ಳಾದ ಅಸ್ತ್ರಗಳಲ್ಲ ಕಂಡಿಯಾ !

|| ಮತ್ತೇಭವಿಕ್ರೀಡಿತಂ ||

ಗುರುವರ್ಯರ್ಕಮಲಾಸನಾದಿಗಳತಿ ಪ್ರಾಚೀನರಾದಂತಪಶ್ ।
ಚರಣಂಬೆತ್ತರು ಸಾವಿರಾರುವರುಷಂ ವೇದಂಗಳಂ ರಕ್ಷಿಸಲ್ ॥
ಸ್ಫುರದಾತ್ಮೀಯ ತಪೋಮಯಂಗಳಲಸತ್ತೇಜಃಸ್ವರೂಪಂಗಳಂ ।
ನೆರೆ ಸಂಪಾದಿಸಿದರ್ ಮಹಾಮಹಿಮೆಯುಳ್ಳೀಜೃಂಭಕಾಸ್ತ್ರಂಗಳಂ ॥ ೧೩ ॥

ಸೀ—ಈ ಅಸ್ತ್ರದೇವತೆಗಳಿಗೆ ಪುನಃ ಪುನಃ ನನ್ನ ನಮಸ್ಕಾರವು.

ರಾ—ಪ್ರಿಯಳೇ, ಇನ್ನು ಈ ದಿವ್ಯಾಸ್ತ್ರಗಳು ನಿಜವಾಗಿ ನಿನ್ನ ಮಕ್ಕಳನ್ನು ಆಶ್ರಯಿಸುತ್ತವೆ.

ಸೀ— ಇದೊಂದು ನನ್ನ ಮೇಲೆ ಅನುಗ್ರಹವಾಯಿತು.

ಲಕ್ಷ್ಮ— ಇನ್ನು ಮುಂದಿನದು ಮಿಥಿಲಾಪಟ್ಟಣದಲ್ಲಿ ನಡೆದ ಸಂಗತಿಯು.

ಸೀ— (ಆಹ್ಲಾದದಿಂದ) ಅಹಾ! ಇಲ್ಲಿ ನಮ್ಮ ಪ್ರಾಣದೊಡೆಯರ ಚಿತ್ರ ವಿದ್ದಂತೆ ಕಾಣುತ್ತದೆ; ಅರಳುತ್ತಿರುವ ಕನ್ನೈದಿಲೆಯ ಕಾಂತಿಯೂ ಕೋಮಲ ವಾದಂಥ ಶೋಭಾಯಮಾನವಾದಂಥ ಪುಷ್ಟವಾದ ಶರೀರ ಸೌಭಾಗ್ಯವೂ ಇವ ರಿಗೆ ಒಪ್ಪುತ್ತವೆ. ಇವರು ಅನಾಯಾಸವಾಗಿ ಶಿವನ ಬಿಲ್ಲನ್ನು ಮುರಿದು ಬಿಟ್ಟಿ ದ್ದಾರೆ. ಜನಕತಾತರು ಚಲುವಿಕೆ ಮುಂತಾದವುಗಳಿಗೆ ಮರುಳಾಗಿ ಸೋಜಿಗ ದಿಂದ ಇವರನ್ನೇ ನೋಡುತ್ತ ನಿಂತಿದ್ದಾರೆ. ಜುಲುಪೇ ಕೂದಲುಗಳಿಂದ ಇವರ ಮುಖಕ್ಕೆ ಮತ್ತಿಷ್ಟು ಚಲುವಿಕೆಯು ಬಂದದೆ.

ಲಕ್ಷ್ಮ— ಎಲೈ ದೇವೀ ಜಾನಕಿ, ಇದನ್ನು ನೋಡು:— ನಿಮ್ಮ ತಂದೆ ಯಾದ ಜನಕಮಹಾರಾಜನು ತಮ್ಮ ಪುರೋಹಿತನಾದ ಶತಾನಂದನನ್ನೂ ಗೌತಮನನ್ನೂ ಕೂಡಿಕೊಂಡು ವಶಿಷ್ಠನೇ ಮುಂತಾದ ಬೀಗರ ಕಡೆಯ ಜನ ರನ್ನು ಪೂಜಿಸುತ್ತಾನೆ.

ರಾ— ಇದೆಲ್ಲಾ ನೋಡತಕ್ಕದ್ದದೆ— ಜನಕರಾಜನ ವಂಶಕ್ಕೂ ರಘು ಕುಲಕ್ಕೂ ಆದ ಸಂಬಂಧವು ಯಾರಿಗೆ ತಾನೇ ಬೇಕಾಗಲಿಕ್ಕಿಲ್ಲ? ಯಾಕಂದರೆ ಈ ಸಂಬಂಧದಲ್ಲಿ ಮಹಾತ್ಮನಾದ ವಿಶ್ವಾಮಿತ್ರನು ಕೊಡುವವನೂ ತಕ್ಕೊಳ್ಳು ವವನೂ ಆಗಿದ್ದಾನೆ.

ಸೀ— ನೀವು ನಾಲ್ಕುಜನ ಅಣ್ಣತಮ್ಮಂದಿರು ಆ ಕಾಲದಲ್ಲಿ ಗೋದಾನಗಳನ್ನು ಕೊಟ್ಟು, ಮಂಗಳವಿಧಿಗಳನ್ನು ಸಂಪಾದಿಸಿ, ವಿವಾಹದೀಕ್ಷಿತರಾಗಿ ಕೂತಿದ್ದೀರಿ! ಮತ್ತು ನಾನಾದರೂ ಅದೇ ಕಾಲದಲ್ಲಿ ಆ ಸ್ಥಳದಲ್ಲೇ ಇದ್ದೇನೆ ಎಂಬಂತೆ ನನಗೆ ಭ್ರಾಂತಿಯಿಂದಾಗಿದೆ.

ರಾ— ಪ್ರಿಯಳೇ ನನಗೂ ಆ ಕಾಲವೇ ಈಗ ನಡೆಯುವದೋ ಏನೋ ಎಂಬಂತೆ ತೋರುತ್ತದೆ. ಆ ಕಾಲಕ್ಕೆ ಈ ನಿನ್ನ ರಮಣೀಯವಾದ ಕಂಕಣಗಳಿಂದ ಒಪ್ಪುವಂಥ, ಮಹೋತ್ಸವದ ಮೂರ್ತಿಯಂತೆ ಇರುವಂಥ, ಗೌತಮನಿಂದ ನನ್ನ ಕೈಯಲ್ಲಿಡಲ್ಪಟ್ಟಂಥ ಹಸ್ತವು ನನಗೆ ಅತ್ಯಂತ ಸಂತೋಷವನ್ನು ಮಾಡಿತು.

ಲಕ್ಷ್ಮ— ( ಚಿತ್ರಗಳ ಕಡೆಗೆ ಬೊಟ್ಟು ಮಾಡಿ ) ಇವರು ನೀವೇ ಜಾನಕೀ ದೇವಿಯರು, ಇವರು ಮಾಂಡವೀ ದೇವಿಯರು, ಈ ವಧುವು ಶ್ರುತಕೀರ್ತಿಯು.

ಸೀ— ( ವಿನೋದದಿಂದ ) ವತ್ಸಾ, ಈ ಮತ್ತೊಬ್ಬ ನಾಲ್ಕನೇ ಸ್ತ್ರೀಯು ದಾರಪ್ಪಾ?

ಲಕ್ಷ್ಮ— ( ಹಾಸ್ಯ ಲಜ್ಜಾ ಯುಕ್ತನಾಗಿ ಮನಸಿನಲ್ಲಿ ) ಏನು? ಈ ಜಾನಕಿಯು ಊರ್ಮಿಳೆಯು ದಾರೆಂದು ನನ್ನನ್ನೇ ಕೇಳುತ್ತಾಳಷ್ಟೇ? ಒಳ್ಳೇದು ಈಕಿಯ ಚಿತ್ತವನ್ನು ಮತ್ತೊಂದು ಕಡೆಗೆ ಒಯ್ಯಬೇಕು. ( ವ್ಯಕ್ತವಾಗಿ ) ದೇವಿ, ಅದನ್ನೇನು ಮಾಡುತ್ತೀ? ಇಗೋ ಇಲ್ಲಿ ನೋಡು! ಈತನು ಮಹಾಮಹಿಮೆಯುಳ್ಳ ಭೃಗುಕುಲೋತ್ಪನ್ನನಾದ ಪರಶುರಾಮನು.

ಸೀ— ( ಮೈ ಮುದುರಿಕೊಂಡು ) ಔವಯ್ಯಾ! ಈತನನ್ನು ನೋಡಿದರೆ ನನಗೆ ನಡುಗು ಬಘುತ್ತದೆ.

ಲಕ್ಷ್ಮ— ಅತ್ತಿಗೀ, ನೋಡು, ಈತನೇ ನಮ್ಮ ರಾಮಚಂದ್ರನಿಂದ ( ಹೀಗೆ ಅರ್ಧ ಮಾತಾಡುವಷ್ಟರಲ್ಲಿ )

ರಾ—( ತಿರಸ್ಕರಿಸಿ ) ತಮ್ಮಾ ಲಕ್ಷ್ಮಣಾ, ಇನ್ನೂ ಬೇರೆ ಬಹಳ ಸಂಗತಿಗಳು ನೋಡತಕ್ಕವುಗಳಾಗಿವೆ. ಅವನ್ನು ತೋರಿಸು.

(ಪ್ರೇಮದಿಂದ ಬಹುಮಾನ ಪೂರ್ವಕವಾಗಿ ನೋಡಿ) ಆರ್ಯಪುತ್ರರೇ ತಾವು ಈ ವಿನಯಯು ಭಾವದಿಂದ ಬಹಳವಾಗಿ ಒಪ್ಪುತ್ತೀರಿ.

ಲ—ಈಗ ಈ ನಾವೆಲ್ಲರೂ ಅಯೋಧ್ಯೆಗೆ ಬಂದೆವು.

ರಾ—(ಕಣ್ಣೀರು ತಂದು) ಆ ದಿವಸಗಳು ಆಗಿಂದಾಗ್ಗೆ ನೆನಪಾಗಿ ಖೇದ ವಾಗುತ್ತದೆ-

|| ವಸಂತತಿಲಕಂ ||

ಅಪ್ಪಯ್ಯನೊಪ್ಪವಡಿದಾವರೆಗಳ್ ಮುದಂಗೊಂ ।
ಡಿಪ್ಪಾಗ ಕಾಂತೆಯರ ಕೈವಿಡಿದಿರ್ದೆವೆಮ್ಮಂ ॥
ಒಪ್ಪಿಂದೆ ತಾಯ್ಗಳೊಸೆದಿರ್ದರು ನೋಡಿನೋಡಿ ।
ಮುಪ್ಪಾಗಿ ಪೋಯ್ತು ಕನಸಾನವಸೌಖ್ಯಕಾಲಂ ॥ ೧೬ ॥

(ತನ್ನ ಮನಸ್ಸಿನಲ್ಲಿಯೇ) ಈ ಜಾನಕಿಯಾದರೂ ಆ ಕಾಲಕ್ಕೆ

॥ ಮಾಲಿನೀವೃತ್ತಂ ॥

ಸರಳವಿರಳಸೂಕ್ಷ್ಮಾಭುಗ್ನರಮ್ಯಾಲಕಂಗಳ್ ।
ಚರಿಪಚಲುವಸೋಟಂ ಪೊಗ್ಗೆವಲ್ಗಳ್ ಮುಖಕ್ಕೆ ॥
ಮೆರೆಯಲಕೃತಕಂ ಬೆಳ್ದಿಂಗಳಂತಾವಿಲಾಸಂ ।
ಬಿರಿಸೆ ಚಲುವನಂಗಂಗಳ್ಗೆ ತಾಂ ಬಾಲ್ಯದಲ್ಲಿ ॥ ೧೭ ॥

|| ಆರ್ಯಾ ||

ತನ್ನೀ ಸ್ವಭಾವಮಾಧು ।
ರ್ಯೋನ್ನತಿಯಿಂದಿತ್ತಳ್ಕಿದೆ ಕೌತುಕಮಂ ॥
ಎನ್ನಂಬಾ ಜನರಿಗೆ ಸಖಿ ।
ವನ್ನಂ ರಾಜೇಂದ್ರಗೃಹದ ಮಾಣಿಕವಂ ॥ ೧೮ ॥

ಲಕ್ಷ್ಮ—ಈಕೆಯು ಮಂಥರೆಯು ನೋಡಿದಿರಾ?

ರಾ— (ಅದಕ್ಕೆ ಮಾತಾಡದೇ ಮತ್ತೊಂದು ಚಿತ್ರವನ್ನು ತೋರಿಸಿ) ಎಲೈ ವಿದೇಹ ರಾಜಪುತ್ರೀ, ಇದನ್ನು ನೋಡಿದಿಯಾ?

ಆಯಿಂಗುದಿಯ ತರುವಿದಂ ।
ದಾಯೋಗ್ಯಸುಮಿತ್ರನಿಂ ಶಬರಪತಿಯಿಂ ॥
ಆಯೆಡೆ ಸಮಾಗಮಂ ನಮ ।
ಗಾಯತಿಹುದು ಶೃಂಗವೇರಪುರಮುಲ್ಲಿ ॥ ೧೯ ॥

ಲಕ್ಷ್ಮ— (ಸಗಂತಾತ್ತ ತನ್ನೊಳಗೆ) ಎಲಎಲಾ!! ನಮ್ಮ ಅಣ್ಣನವರು ನಡುವಿನ ತಾಯಿಯ ಚರಿತ್ರವನ್ನು ಬಿಟ್ಟುಬಿಟ್ಟರು, ಮರಿತರೇನು?

ಜಾ— ಆರ್ಯ ಪುತ್ರರೇ, ಇಲ್ಲೇ ತಾವು ಜಟಾಬಂಧನವನ್ನು ಮಾಡಲಿಲ್ಲವೇ ?

ಲಕ್ಷ್ಮ— ಅಕಟಕಟಾ!!

॥ ವಸಂತತಿಲಕಂ ॥

ಈ ರಾಜ್ಯಭಾರವ ತನೂಜರೊಳಿಟ್ಟು ಸತ್ಸೀ ।
ವ್ಯಾರಣ್ಯದೊಳ್ ಪಿರಿಯರಿರ್ದರು ಪಿಂತೆ ನಮ್ಮ ॥
ಆ ರೀತಿಯಂ ಪೊಸತು, ಬಾಲ್ಯದೊಳಣ್ಣ ದೇವಂ ।
ಮಾರಿರ್ಪನಾಂತು ವನವಾಸದ ನೋಂಪಿಯನ್ನು ॥ ೨೦ ॥

ಸೀ—ಈಕೆ ಭಾಗೀರಥಿಯು; ತನ್ನ ಪವಿತ್ರವಾದ ತಿಳಿನೀರಿನಿಂದ ಮೂರು ಲೋಕಗಳನ್ನು ಶುದ್ಧಮಾಡುವ ಮಹಾತ್ಮಳು. ತಾಯಿ ನಿನಗೆ ವಂದಿಸುತ್ತೇನೆ.

ರಾ—ಎಲೈ ದೇವೀ, ಜಾಹ್ನವೀ, ರಘುಕುಲದೇವತೇ, ನಿನಗೆ ನಮಸ್ಕಾರವು.

॥ ವಾರ್ಧಿಕ ॥

ಸಗರಯಾಗಾಶ್ವಮಂ ತತ್ಸುತರ್ ಭೂಮಿಯಂ ।
ಬಗೆದು ಹುಡುಕುತ್ತಿರಲ್ ಕಪಿಲತೇಜೋರೋಷ ।
ಕೊಗೆದವಗ್ನಿಯಿಂ ಭಸ್ಮವಾದರವರೆಮ್ಮಯ್ಯ ನಯ್ಯ ನಯ್ಯನತಾತರು ॥
ಭಗವತಿ, ಭಗೀರಥಂ ಬಳಿಕ ತಪಿಸುತ್ತಿರಲ್ ।
ಕಗಣಿತಾಂಗಶ್ರಮವನೀಕ್ಷಿಸದೆ, ಭಕ್ತಿಗೊಲಿ ।
ದೊಗೆತಂದ ನಿನ್ನ ಪುಣ್ಯೋದಕಂ ಸೋಂಕಲುದ್ಧೃತರಾದರತಿಕಾಲಕೆ ॥ ೨೧ ॥

ಅಂಥಾ ನೀನು ನಮ್ಮ ತಾಯಿಯಾಗಬೇಕು; ಈ ವೈದೇಹಿಯು ನಿನ್ನ ಸೊಸೆಯು. ಆದ್ದರಿಂದ ಅರುಂಧತಿಯಂತೆ ನೀನೂ ಈಕೆಯ ಕಲ್ಯಾಣವನ್ನು ಯಾವಾಗಲೂ ಚಿಂತಿಸುತ್ತಿರು ಕಂಡ್ಯಾ !

ಲಕ್ಷ್ಮ—ಅಣ್ಣಾ, ಇದು ಭರದ್ವಾಜರು ನಮಗೆ ಚಿತ್ರಕೂಟದ ಮಾರ್ಗದಲ್ಲಿ ಗೊತ್ತಿಗಾಗಿ ಹೇಳಿದಂಥ ಯಮುನಾತೀರದಲ್ಲಿರುವಂಥ ಶ್ಯಾಮವೆಂದೆನಿಸುವ ದೊಡ್ಡ ಆಲದಮರವು.

ರಾ—( ಅದನ್ನು ಸಾಕಾಂಕ್ಷಿತನಾಗಿ ನೋಡುತ್ತಾನೆ ).

ಸೀ—ಈ ಸ್ಥಳವನ್ನು ಪ್ರಾಣದೊಡೆಯರು ನೆನಿಸುವಂತೆ ಕಾಣುತ್ತದೆ.

ರಾ—ಸಖಿಯೇ, ನಾನು ಇದನ್ನು ಹ್ಯಾಗೆ ಮರೆಯಲಿ ? ಇಲ್ಲಿ:—

॥ ಮಾಲಿನೀ ವೃತ್ತ ॥

ಚಲಿಸಿ ಚಲಿಸಿ ಮಾರ್ಗಾಯಾಸಕಾಲಸ್ಯಮೊಳ್ದು ।
ತಳೆದು ಬಿಗಿಯುಸಂಶ್ಲೇಷೋಪಚಾರಂಗಳನ್ನು ॥
ಬಳಲಿದ ಬಿಸಕಾಂಡಂಬೋಲ್ವರಮ್ಯಾಬಲಾಂಗಂ ।
ಗಳಮದುರದೊಳಿಟ್ಟಂದಿಲ್ಲಿ ನೀಂ ನಿದ್ರಿಸಿದ್ದಿ ॥ ೨೨ ॥

ಲಕ್ಷ್ಮ—ಇದು ವಿಂಧ್ಯಾರಣ್ಯದ ಮುಂಭಾಗವು; ಇಲ್ಲೇ ವಿರಾಧನೆಂಬ ರಾಕ್ಷಸನಿಗೂ ನಮಗೂ ಸಂವಾದವಾಗಿತ್ತು.

ಸೀ—ಸಾಕು ಸಾಕು! ಇದನ್ನು ನಾನು ನೋಡಲಾರೆನು, ಇನ್ನು ನಮ್ಮ ಒಡೆಯರು ಕೈಯಲ್ಲಿ ತಾಡಪತ್ರದ ಕೊಡೆಯನ್ನು ಹಿಡಿದುಕೊಂಡು ದಕ್ಷಿಣಾರಣ್ಯದಲ್ಲಿ ಹೊಕ್ಕಿದ್ದರಲ್ಲ? ಅದನ್ನು ನಾವು ನೋಡೋಣ.

ರಾ—ಜಾನಕೀ, ಈ ವನಗಳ ಗೊತ್ತು ಸಿಕ್ಕಿತೇ ?

॥ ಮಾಲನೀವೃತ್ತ ॥

ಇವವು ಗಿರಿನದೀತೀರಂಗಳೊಳ್ತಾಪಸರ್ಕಾ ।
ದವನಿಜಶತಿ ತೀವಿರ್ಪಾತಪಃ ಕಾನನಂಗಳ್ ।
ಅವರು ಗೃಹಿಗಳಾತಿಥ್ಯಂಗಳಂ ಮಾಳ್ಪರಲ್ಲಿ ।
ಸ್ವವಸತಿಯೊಳು ಶಾಂತರ್ಬೇಸಿ ನೀವಾರವನ್ನು ॥ ೨೩ ॥

ಲಕ್ಷ್ಮ— ಇದು ಜನಸ್ಥಾನದ ಮಧ್ಯಭಾಗದಲ್ಲಿರುವ ಪ್ರಸ್ರವಣಗಿರಿಯು; ಇದರ ಬಳಿಯಲ್ಲಿ ದಟ್ಟವಾದ ಗಿಡಗಳ ಗುಂಪುಗಳಿಂದ ತಂಪಾದಂಥ ನೀಲವರ್ಣವುಳ್ಳ ಅಡಿವೆಗಳಿವೆ; ಅಲ್ಲಿ ಗೋದಾವರಿಯು ಹರಿಯುತ್ತದೆ; ಆ ನದೀ ಪ್ರವಾಹವು ಕೊಳ್ಳಗಳಲ್ಲಿ ಬೀಳುವದರಿಂದ ಹುಟ್ಟಿದ ಗಂಭೀರನಾದವು ವನದಲ್ಲೆಲ್ಲ ತುಂಬಿರುತ್ತದೆ; ದಿನಾಲೂ ಜಲಗಳನ್ನು ಸುರಿಸುವ ಕರೇ ಮೋಡಗಳಿಂದ ಈ ಪರ್ವತಕ್ಕೆ ದಟ್ಟವಾದ ನೀಲಕಾಂತಿಯು—ಉಂಟಾಗಿರುತ್ತದೆ.

ರಾ— ಸೀತೇ, ಈ ಬೆಟ್ಟವು ನಿನ್ನ ಗೊತ್ತಿನದಾಗಿರಬಹುದು.

॥ ಮತ್ತೇಭವಿಕ್ರೀಡಿತವೃತ್ತಂ ॥

ನೆನಪುಂಟೇ ಲಲಿತಾಂಗಿ? ಈ ಗಿರಿಯೊಳಂದಾಪಿರ್ದುದೀಲಕ್ಷ್ಮಣಂ ।
ಮನಸಿಂ ಮಾಡಿದ ಸೇವೆಯಿಂದ ಸುಖದಿಂ ಪೋದಾದಿನಂಗಳ್ಸಖೀ ? ॥
ನೆನಪುಂಟೇ ಪ್ರಿಯೆ? ಇರ್ಪಳಲ್ಲಿ ಮಧುರಾಂಭೋಯುಕ್ತೆ ಗೋದಾವರಿ ।
ವಿನಯಾಭಾಷಿಣಿ, ತತ್ತಟಂಗಳೊಳೆ ನಾವಾಡಿದ್ದು ಗೊತ್ತುಂಟೆ ಪೇಳ್ ॥ ೨೪ ॥

ಮತ್ತು ನಾವು ಇಲ್ಲಿ ಒಂದು ದಿವಸದಲ್ಲಿ:—

॥ ಶಾರ್ದೂಲವಿಕ್ರೀಡಿತಂ ॥

ಏನೇನೋ ಸಖಿ, ಒಯ್ಯನೊಯ್ಯನೆ ರಹಸ್ಯಾಸಕ್ತಿಯಿಂದಕ್ರಮಂ ।
ನೀನಾಂ ಲಗ್ನಕಪೋಲರುಂದಮಿತಸಲ್ಲಾಪಂಗಳಂನಾಡುತ ॥
ಸಾನಂದರ್ಬಿಗಿದಪ್ಪಿದಾಗ ಬಿಗಿಯಲ್ ತೋಳೊಂದನೊಂದೆಮ್ಮಯ ।
ಈನಮ್ಮಾರ್ವರ ಮಾತು ತೀರದಿರಲಿನ್ನುಂ ಪೋದುದಾರಾತ್ರಿಯು ॥ ೨೩ ॥

ಲಕ್ಷ್ಮ— ಇದು ಪಂಚವಟಿಯು; ಇಲ್ಲಿ ಇವಳೇ ಶೂರ್ಪನಖಿಯು.

ಸೀ— ಅಹಹ!! ಪ್ರಾಣದೊಡೆಯರೆ, ಈವರಿಗೆ ಮಾತ್ರ ನಮ್ಮಿಬ್ಬರ ಸಹವಾಸವಷ್ಟೆ?

ರಾ— ಪ್ರಿಯಳೇ ವಿಯೋಗಕ್ಕೆ ಹೆದರಬೇಡ, ಇದು ಚಿತ್ರವದೆ, ಹಿಂದಿನಂತೆ ಅರಣ್ಯವಲ್ಲ, ಅಂಜಬೇಡ.

ಸೀ— ಹ್ಯಾಗೇ ಆಗಲಿ, ದುರ್ಜನರು ದುಃಖವನ್ನುಂಟು ಮಾಡುತ್ತಾರೆ.

ರಾ— ಹಾ ಪ್ರಿಯಳೇ, ಜನಸ್ಥಾನದಲ್ಲಿ ನಡೆದ ಸಂಗತಿಯು ಈಗಲೂ ನನ್ನ ಕಣ್ಣಿಗೆ ಕಟ್ಟಿರುತ್ತದೆ; ಏನು ಹೇಳಲಿ?

ಲಕ್ಷ್ಮ—

॥ ಶಿಖರಿಣೀವೃತ್ತಂ ॥

ಇದಾ ಚಿತ್ರಂ, ದುಷ್ಟರ್ ಕನಕಮೃಗಮೆಂಬೊಂದುನೆವದಿಂ ।
ಕುದೃತ್ಯರ್ ಮಾಡಿದ್ದೇ, ಬಿಡದವರ ಕೊಂದುಂ ನೋಯಿಪುದು ॥
ಅದಕ್ಕಣ್ಣಂ ಬೆಡಾಗಿ ವಿಜನಜನಸ್ಥಾನದಲಿ ತಾ ।
ಳ್ದ, ದುಃಖಕ್ಕಂ ಕಲ್ಲತ್ತುದು, ಕರಗಿತ್ತೆ ವಜ್ರಹೃದಯಂ ॥ ೨೬ ॥

ಸೀ— (ಕಣ್ಣೀರು ಸುರಿಸುತ್ತಾ) ಹಾ ದೇವಾ! ರಘುಕುಲಾಹ್ಲಾದಕಾ! ನನ್ನ ಸಲುವಾಗಿ ನೀನು ಇಂಥಾ ಘೋರ ದುಃಖಗಳನ್ನು ಉಣ್ಣಬೇಕಾಯಿತು.

ರಾ— (ಸೀತೆಯ ಮಾತುಗಳಿಂದ ಕಣ್ಣೀರು ಸುರಿಸುತ್ತಾನೆ.)

ಲಕ್ಷ್ಮ— (ರಾಮನ ಮೋರೆಯನ್ನು ನೋಡಿ) ಅಣ್ಣಾ, ಇದೇನು?

ಇದು ನಿನ್ನಕ್ಷಿಜಲಂ, ಸರಂಪರಿಯೆ ಬೀಳ್ವಾಮುತ್ತಿನಲ್ ತುಂತುರಾ ।
ಗಿ, ಧರಾಭಾಗದಿ ಧಾರೆಯಾಗಿ ಸುರಿದ್ಯೆದುತ್ತಿರ್ಪುದಾಹಳ್ಳದೊಲ್ ॥
ಅದರುತ್ತಿರ್ಪವು, ನಾಶಿಕಾಗ್ರಮಧರಂ ಹಾರುತ್ತದೈಕ್ಲೇಶದಿಂ
ದೆದೆ, ತೋರುತ್ತಿಹುದೀಕ್ಷಿಪರ್ಗದಕೆ ಶೋಕೋದ್ರೇಕಮೊತ್ತಲ್ಕೆಯುಂ ॥ ೨೭ ॥

ರಾ—ತವೆಮ್ಮಾ ಲಕ್ಷ್ಮಣಾ, ಏನುಹೇಳಲಿ?

ಆಕಾಲಕೇಕೆಯ ವಿಯೋಗದೆ ಹುಟ್ಟಿದೆನ್ನಾ ।
ಶೋಕಾಗ್ನಿ ತೀಕ್ಷ್ಣಮಿರೆಯುಂ ಪ್ರತಿಯತ್ನಮುಂಟೆಂ ॥
ಬೀಕಾಂಕ್ಷೆಯಿಂ ಸುಸಹವಾಯ್ತುದು, ಹೊತ್ತ ಮತ್ತಂ ।
ವೈಕಲ್ಯಮಿತ್ತಪುದು ಮರ್ಮದ ಹುಣ್ಣಿನಂತೆ ॥ ೨೮ ॥

ಸೀ—ಔವಯ್ಯಾ! ಈಗ ನನಗೆ ಅದ್ಭುತ ದರ್ಶನದ ಭೀತಿಯಿಂದ ನನ್ನನ್ನು ಪ್ರಾಣದೊಡೆಯರು ಅಗಲಿ ಹೋದಂತೆ ಭಾಸವಾಗುತ್ತದೆ.

ಲಕ್ಷ್ಮ—(ಮನಸ್ಸಿನಲ್ಲಿ) ಇವರಿಗೆ ಇನ್ನು ಬೇರೆ ಚಿತ್ರಗಳನ್ನು ತೋರಿಸ ಬೇಕು. (ಚಿತ್ರಪಟವನ್ನು ನೋಡುತ್ತಾ ಪ್ರಕಟವಾಗಿ) ಇದು ಮನ್ವಂತರಾಂತರದಲ್ಲಿದ್ದ, ಪುರಾತನಗೃಧ್ರರಾಜನಾದ, ನಮಗೆ ತಂದೆಯಂತೆ ಮಾನ್ಯನಾದ ಜಟಾಯುವಿನ ಪರಾಕ್ರಮದ ಪ್ರಖ್ಯಾತಚಿತ್ರವು.

ಸೀ—ಹಾ ತಂದೇ ಜಟಾಯುವೇ! ನಿನ್ನ ಪುತ್ರವಾತ್ಸಲ್ಯವನ್ನು ನೀನು ಕೊನೆಗಾಣಿಸಿ ಬಿಟ್ಟೆಪ್ಪಾ?

ರಾ—ಎಲೈ ಕಶ್ಯಪಕುಮಾರ! ಖಗೇಶ್ವರ! ಅಪ್ಪಾ! ನಿನ್ನಂಥಾ ತೀರ್ಥ ರೂಪಿಯಾದ ಸಾಧುವಿನ ಸಮಾಗಮವು ನಮಗೆ ಇನ್ನು ಮೇಲೆ ಹ್ಯಾಗಾದೀತು?

ಲಕ್ಷ್ಮ—ಇಗೋ ಇದು—ಜನಸ್ಥಾನದ ಪಶ್ಚಿಮುಕ್ಕಿರುವ 'ಚಿತ್ರಕುಂಜ ವಾನ್' ಎಂಬ ಹೆಸರಿನ ದಂಡಕಾರಣ್ಯದ ಭಾಗವು; ಇಲ್ಲೇ ದನುಕಬಂಧಾದಿ ರಾಕ್ಷಸರು ಇರುತ್ತಿದ್ದರು; ಇದು ಆ ರುಷ್ಯಮೂಕ ಗಿರಿಯಲ್ಲಿ ಮತಂಗ ಋಷಿ ಗಳ ಆಶ್ರಮಸ್ಥಾನವು; ಇವಳು ಶ್ರಮಣೆ ಎಂಬ ಹೆಸರಿನ ಶಬರಜಾತಿಯ ಸಿದ್ಧ ಸ್ತ್ರೀಯು; ಇದೇ ಪಂಪಾಸರೋವರವು.

ಸೀ—ಇಲ್ಲೇ ಆರ್ಯಪುತ್ರರು ಹಗೆಗಳ ಮೇಲಿನ ಸಿಟ್ಟಿನಿಂದಲೂ, ವಿರ ಹದ ದುಃಖದಿಂದಲೂ ದನಿ ತೆಗೆದು ಅತ್ತರಂತೆ! ಅಲ್ಲೇ?

ರಾ—ದೇವೀ, ಈ ಪಂಪಾಸರೋವರವು ಬಹು ಚಂದವಾಗಿದೆ; ಮತ್ತೂ

ಇಲ್ಲೀ ಪ್ರಮತ್ತಕಲಹಂಸಗಳಾಟದಿಂದಂ ।
ದಲ್ಲಾಡುವಂಬುಜಗಳುಳ್ಳ ಕೊಳಂಗಳಿಂದೆ ॥
ಉಲ್ಲಾಸವಂ ಮನಸಿಗೀವ ವನಪ್ರದೇಶಂ ।
ಫುಲ್ಲಾಕ್ಷಿ ಕಂಡಿತಿಳಿವಾಗೆನಗಶ್ರುಕಣ್ಣಿಂ॥ ॥೨೯॥

ಲಕ್ಷ್ಮ—ಈತನು ಮಹಾನುಭಾವನಾದ ಆಂಜನೇಯನು.

ಸೀ—ಈತನೇ ಬಹು ಕಾಲದಿಂದ ನಿರ್ವಿಣ್ಣಳಾದ ಈ ಪ್ರಾಣಿಯನ್ನು ದುಃಖದಿಂದ ಪಾರಮಾಡಿದ ಮಹೋಪಕಾರಿಯು; ಲೋಕವಂದ್ಯನಾದ ವಾಯು ಕುವರನು.

ರಾ—ಈತನು ಅಂಥವನೇ ಹೌದು !

|| ಶಾಮುದಾವೃತ್ತಃ ||

ಈತನೇ ಮಹಾಬಾಹುವಂಜನಾ ।
ಪ್ರೀತಿವರ್ಧನಂ ದೈತ್ಯಮರ್ದನಂ ॥
ಸೀತೆ, ಧನ್ಯರಾವೀಜಗತ್ತು ಮೇ ।
ಣೀತನಾ ಮಹಾಮೋಘಶಕ್ತಿಯಿಂ ॥ ೩೦ ॥

ಲಕ್ಷ್ಮ—ತಮ್ಮಾ ಲಕ್ಷ್ಮಣಾ, ಈ ಬೆಟ್ಟದ ಹೆಸರೇನು ? ಸೊಗಸಾಗಿ ಬೆಳೆವ ಕದಂಬವೃಕ್ಷಗಳನ್ನು ನೋಡಿ, ನವಿಲುಗಳು ನಲಿದಾಡುತ್ತಲಿವೆ; ಅಲ್ಲೇ ಒಂದು ವೃಕ್ಷದಕೆಳಗೆ ಪ್ರಾಣದೊಡೆಯರು ನಿಂತಿದ್ದಾರೆ, ಇವರ ಮೋರೆಯು ಬಾಡಿರುತ್ತದೆ; ಇವರು ತಮ್ಮ ಸಾಮರ್ಥ್ಯ ವೈಭವದಿಂದ ಮಾತ್ರ ಒಪ್ಪುತ್ತಾರೆ; ಒಂದು ಜಾವು ಎಚ್ಚರದಪ್ಪಿದ್ದರಿಂದ ದುಃಖಿತನಾದ ನಿನ್ನಿಂದ ಹಿಡಿಯಲ್ಪಟ್ಟಿರುತ್ತಾರೆ, ಎಂಬಂತೆ ಕಾಣುತ್ತದೆ,

ಲಕ್ಷ್ಮ—ದೇವೀ ಕೇಳು:—

|| ಮಂದಾಕ್ರಾಂತಾವೃತ್ತಂ ||

ಆಶೈಲಂ ತಾನಿದು ನಿಬಿಡನೀಲಾಭ್ರ ಸಂಯುಕ್ತಶೃಂಗಂ ।
ವಾಸಂ ಶ್ವೇತಾರ್ಜುನತರುಸುಗಂಧಕ್ಕೆ ಕೇಳ್ ಮಾಲ್ಯವಂತಂ ॥

ರಾಮ—

|| ಉತ್ತರಾರ್ಧ ||

ಹಾ ! ಸೌಮಿತ್ರೀ ತಿರುಗು ತಿರುಗಿಲ್ಲಿಂದ ನಾಂ ತಾಳೆನೀಮೇಲ್ ।
ಆ ಸೀತಾ ದುರ್ವಿರಹಮಿದಕೋ ! ಮತ್ತೆ ತಾಂ ನೋಳ್ಪುದೆನ್ನಂ ॥ ೩೧ ॥

ಲಕ್ಷ್ಮ—ಇನ್ನು ನಮ್ಮ ಪ್ರಭುಗಳಿಂದ ಹಾಗೇ ಕಪಿರಾಕ್ಷಸರುಗಳಿಂದ ಪ್ರಕಟಿತವಾದಂಥ ಅತ್ಯದ್ಭುತವಾದ ಎಷ್ಟೋ ಕಾರ್ಯಗಳು ನೋಡಲಿಕ್ಕೆ ಉಂಟು; ಆದರೆ ನಮ್ಮ ಅತ್ತಿಗೆಯವರು ನೋಡಿ ದಣಿದಿದ್ದಾರೆ. ಆದದರಿಂದ ಇಂದಿಗೆ ಚಿತ್ರನೋಡೋಣ ಸಾಕೆಂದು ಬಿನ್ನವಿಸುತ್ತೇನೆ.

ಸೀ—ಆರ್ಯಪುತ್ರರೇ, ಈ ಚಿತ್ರಗಳನ್ನು ನೋಡುವದರಿಂದ ಈಗ ನನಗೊಂದು ಬಯಕೆಯುಂಟಾಗಿದೆ; ಆದದರಿಂದ ಪ್ರಭುಗಳ ಅಡಿದಾವರೆಗಳಲ್ಲಿ ನನ್ನದೊಂದು ಬಿನ್ನಹವುಂಟು.

ರಾ—ಬಿನ್ನಹವೆಂದೆನ್ನಬೇಡ ! ಏನೆಂಬದನ್ನು ನನಗೆ ಹೇಳು, ಅಂದರಾಯಿತು.

ಸೀ—ಒಲ್ಲೆನು, ದೊರೆಗಳೇ ತಮ್ಮ ಚರಣಗಳಲ್ಲಿ ನನ್ನ ಬಿನ್ನಹವೇ ತಕ್ಕದ್ದು; ಅದೇನಂದರೆ:—ಸೊಗಸಾದಂಥ, ದಟ್ಟವಾದಂಥ ವನಗಳ ಸಾಲುಗಳಲ್ಲಿ ಇನ್ನೊಮ್ಮೆ ವಿಹಾರಮಾಡಬೇಕು; ಮತ್ತು ಭಾಗೀರಥಿಯ ಪುಣ್ಯಕಾರಕವಾದ ಸ್ವಚ್ಛಶೀತಳೋದಕದಲ್ಲಿ ಸ್ನಾನಗಳನ್ನು ಮಾಡಬೇಕು, ಎಂದು ನನ್ನ ಮನಸ್ಸು ಹರಿಯುತ್ತದೆ.

ರಾ—ತಮ್ಮಾ ಲಕ್ಷ್ಮಣಾ,—

ಲಕ್ಷ್ಮ—ಏನಪ್ಪಣೆ ?

ರಾ—ಇದೇ ಈಗಲೇ ಗುರುಜನರು ಜಾನಕಿಯ ಬಯಕೆಗಳನ್ನು ಬೇಗ ಪೂರಯಿಸಬೇಕೆಂದು ಹೇಳಿ ಕಳುಹಿದ್ದಾರೆ. ಕಾರಣ ಸುಖಕೊಡುವಂಥ ಸರಳವಾಗಿ ನಡಿಯುವಂಥ ರಥವನ್ನು ಸಿದ್ಧಮಾಡಿ ತಾ. ಈಕೆಯ ವನವಿಹಾರರೂಪವಾದ ಬಯಕೆಯನ್ನು ಪೂರ್ಣಮಾಡಬೇಕಾಗಿದೆ.

ಲಕ್ಷ್ಮ—ಅಣ್ಣಾ, ಹಾಗಾದರೆ ಈಗ ಬರುತ್ತೇನೆ. (ಎಂದು ಹೊರಟು ಹೋಗುತ್ತಾನೆ.)

ಸೀ— ಪ್ರಾಣಪ್ರಿಯರೇ, ತಾವಾದರೂ ಅಲ್ಲಿಗೆ ಬರಬೇಕು.

ರಾ—ಎಲೈ ಕಠಿಣಮನಸಿನವಳೇ, ಇದನ್ನು ನನಗೆ ನೀನು ಹೇಳತಕ್ಕದ್ದೇ? ನಾನು ಬರಲಿಕ್ಕಿಲ್ಲವೆಂದು ತಿಳಿದಿಯಾ?

ಸೀ—ಹಾಗಾದರೆ, ನನಗೆ ಬಹಳೇ ಸೌಖ್ಯವಾದೀತು.

ರಾ—ಪ್ರಿಯಳೇ, ಲಕ್ಷ್ಮಣನು ರಥವನ್ನು ತರುವವರೆಗೆ ಎರಡು ಘಳಿಗೆ ಕಿಡಕಿಯ ಬಳಿಯಲ್ಲಿ ಸುಳಿಗಾಳಿಗೆ ಕೂತುಕೊಳ್ಳೋಣ.

ಸೀ—ಹಾಗೇ ಆಗಲಿ, ನನಗಾದರೂ ಚಿತ್ರಗಳನ್ನು ನೋಡಿದ ಶ್ರಮದಿಂದ ಬಂದ ನಿದ್ರೆಯು ಬಹು ಪೀಡಿಸುತ್ತದೆ.

ರಾ—ಹೀಗಿದ್ದರೆ, ಇಲ್ಲಿ ನನ್ನ ತೊಡೆಯ ಮೇಲೆ ತಲೆ ಇಟ್ಟು, ನಿಶ್ಚಿಂತ ಳಾಗಿ ತುಸುಹೊತ್ತು ಮಲಗು; ಇಲ್ಲದಿದ್ದರೆ—

|| ವಸಂತತಿಲಕಂ ||

ತಾರಾಪತಿದ್ಯುತಿಗೆ ನೀರ್‌ಬಿಡುವಿಂದುರತ್ನ ।
ಹಾರಂಬೊಲೊಪ್ಪುವ ಭುಜಂಗಳ ಕಂಠಕೀಯೆ ॥
ತೋರಲ್ಕೆ ಚಿತ್ರವ ಬೆಮರ್ತಿವೆ ಭೀತಿಯಿಂದ ।
ಸ್ಮೇರಾಸ್ಯೆ, ರಾಜಿಪವು ಜೀವಿತದಂತಿವೆನ್ನ ॥ ೩೨ ॥

ರಾ— (ಹಾಗೇ ಮಾಡಿ ಬಹಳಾನಂದವುಳ್ಳವನಾಗಿ) ಪ್ರಿಯಳೇ ಇದೇನು? ನನಗೆ ಏನಾಗಿದೆಯೋ ತಿಳಿಯದು:—

|| ಮತ್ತೇಭವಿಕ್ರೀಡಿತಂ ||

ಸುಖವೋ, ದುಃಖವೊ, ನಿದ್ರೆಯೋ, ಮದವೊ, ಮೋಹಾಮೋದವೋ, ನಂಜಿನೇ ।
ರಿಕೆಯೋ, ನಿಶ್ಚಯವಾಗದೇನಿದು? ವಿಕಾರಕ್ಕೆನ್ನ ಚೈತನ್ಯವು ॥
ಸಖಿಯೇ ಚಂಚಲಮಪ್ಪುದು ಸ್ಥಿರತೆಯಂ ತಾಳ್ದಪ್ಪುದೊಮ್ಮೊಮ್ಮೆ ವೋ ।
ಹಕರೀ, ಸ್ತಂಭಿತವಾದವಿಂದ್ರಿಯಗಳಾಹಾ! ನಿನ್ನ ಸಂಸ್ಪರ್ಶದಿಂ ॥ ೩೩ ॥

ಸೀ—(ನಕ್ಕು ಮಾತನಾಡುತ್ತಾಳೆ) ಪ್ರಾಣಪ್ರಿಯಾ, ತಮ್ಮ ಪ್ರೀತಿಯೂ, ಕೃಪೆಯೂ ನನ್ನಲ್ಲಿ ಪೂರ್ಣವಾಗಿವೆ, ಅವುಗಳ ಲಕ್ಷಣವೇ ಇದಲ್ಲದೆ ಮತ್ತೇನದೆ?

ರಾ—ಪ್ರಿಯಳೇ ನಿನ್ನ ಮಾತುಗಳ ಸವಿಯನ್ನು ಬಣ್ಣಿಸಲಾರೆನು:—

|| ವಸಂತತಿಲಕಂ ||

ಸಂತಪ್ತಜೀವಕುಸುಮಕ್ಕೆ ವಿಕಾಸನಂಗಳ್ ।
ಸಂತರ್ಪಣಂಗಳಖಿಲೇಂದ್ರಿಯಮೋಹನಂಗಳ್ ॥
ಇಂತಪ್ಪ ನಿನ್ನಸವಿಮಾತುಗಳೆನ್ನ ಕರ್ಣ ।
ಕ್ಕಂತಾವಮರ್ದು ಮನಸಿಗೆ ರಸಾಯನಂಗಳ್ ॥ ೩೪ ॥

ಸೀ—ಪ್ರಿಯರೇ, ಬರ್‍ರಿ; ಇನ್ನು ಮಲಗೋಣ. (ಹೀಗೆಂದು ಅತ್ತಿತ್ತ ಮಲಗುವ ಸಾಧನಗಳನ್ನು ಹುಡುಕುತ್ತಾಳೆ)

ರಾ—ಪ್ರಿಯಳೇ ಮತ್ತೇನು ಹುಡುಕುತ್ತೀ ?

ಕೇಳಿನ್ನೆಗಂ ಸುಮುಖಿ, ನಿನ್ನವಿವಾಹದಿಂದ ।
ಬಾಲತ್ವದೊಳ್ ಭವನದೊಳ್ ವನದೊಳ್ ಪ್ರಬುದ್ಧ ॥
ಕಾಲಕ್ಕೆ ರಾಮನಭುಜಂ ತಲೆಗಿಂಬು ನಿಂಗೆ ।
ಲೋಲಾಕ್ಷಿ, ವಾಸಲಿದು ಸೌಖ್ಯದಿ ನಿದ್ರಿಸಿಲ್ಲಿ ॥ ೩೫ ॥

ಸೀ—ಹೌದು, ಆರ್ಯಪುತ್ರರೇ ಹೌದು. ( ಹೀಗೆಂದು ರಾಮನ ತೋಳ ತಲೆಗಿಂಬುಳ್ಳವಳಾಗಿ ಮಲಗಿಕೊಳ್ಳುತ್ತಾಳೆ. )

ರಾ—( ತನ್ನೊಳಗೇ ) ಅಹಾ ! ಸವಿಮಾತಿನ ಸುಂದರಿಯು ನನ್ನ ಮೈ ಮೇಲೆ ಮಲಗಿದಳು. ( ಎಂದು ದಿಟ್ಟಿಸಿ ನೋಡಿ ಮೃದುತವಿ )

॥ ಮತ್ತೇಭವಿಕ್ರೀಡಿತಂ ॥

ಮನೆಗೀಸುಂದರಿ ಲಕ್ಷ್ಮಿ, ಕಂಗಳಿಗಿವಳ್ ಪೀಯೂಷದಿಂ ಮಾಡಿದಂ ।
ಜನದಾದಿವ್ಯಶಲಾಕೆ, ಮೈಗಿವಳಸೋಂಕೇ ಚಂದನಾಲೇಪನಂ ।
ಎನಗೀಕಂಠದೊಳಿರ್ಪ ಬಾಹು ಮೃದುಲಂ ಮುಕ್ತಾಸರಂ ಶೀತಲಂ ॥
ಮನಕಪ್ರಿಯಮದಾವುದೀಕೆಯವಿಯೋಗಂತಾನದೊಂದೇಸರಿ ॥ ೩೬ ॥

ದ್ವಾರಪಾಲಿಕೆಯು—( ಒಳಹೊಕ್ಕು ) ದೇವಾ, ಬಂದಿದ್ದಾನೆ.

ರಾ—ಎಲೈ ದ್ವಾರಪಾಲಿಕೇ, ದಾರು ?

ದಾ—ಪ್ರಭುಗಳ ಸನ್ನಿಧಿಯ ಪರಿಚಾರಕನಾದ ದುರ್ಮುಖನು.

ರಾ—( ತನ್ನೊಳಗೆ ) ಅಂತಃಪುರಪರಿಚಾರಕನಾದ ದುರ್ಮುಖನೇ ? ಪ್ರಜೆಗಳ ಮನಸ್ಸನ್ನು ಪರೀಕ್ಷಿಸುವದಕ್ಕೋಸ್ಕರ ನನ್ನಿಂದ ಕಳುಹಲ್ಪಟ್ಟಿದ್ದನು; ಹೌದು. ( ವ್ಯಕ್ತವಾಗಿ ) ಒಳ್ಳೇದು, ಆತನನ್ನು ಒಳಗೆ ಕಳುಹಿಸು.

ದ್ವಾರಪಾ—( ಹೊರಗೆ ಹೋಗುತ್ತಾಳೆ. )

ದುರ್ಮುಖ—( ಒಳಗೆ ಬರುತ್ತಾನೆ. )

ದುರ್ಮುಖನು— ( ತನ್ನೊಳಗೆ ) ಹಾ! ದೈವವೇ ! ಸೀತಾದೇವಿಯರಿಗೆ ಬಂದ, ಇಂಥಾ ಹೇಳಲಾರದ ಜನಾಪವಾದವನ್ನು ದೊರೆಗಳಿಗೆ ಹ್ಯಾಗೆ ತಿಳಿಸಲಿ? ಮತ್ತು ತಿಳಿಸದೆಯಾದರೂ ಹ್ಯಾಗಿರಲಿ ? ದೈವಗೇಡಿಯಾದ ನನ್ನ ದಿನದ ಕೆಲಸವೇ ಇದು. ಹೇಳಬೇಕಾಗಿ ಬಂತು.

ಸೀ — (ಕನವರಿಸುತ್ತಾಳೆ) ಹಾ ! ಆರ್ಯಪುತ್ರರೇ, ಎಲ್ಲಿದ್ದೀರಿ ?

ರಾ— ಅಹಹ ! ನನಗೆ ಹೆಚ್ಚಾದ ಅಂಜಿಕೆಯನ್ನೂ ದುಃಖಗಳನ್ನೂ ಕೊಡುವ ಈ ವಿರಹದ ಭಾವನೆಯೇ ಚಿತ್ರವನ್ನು ನೋಡುವದರಿಂದ ಈಕೆಯ ಮನಸಿನಲ್ಲಿಯೂ ಸೇರಿ, ನಿದ್ದೆಯಲ್ಲಿ ಹೀಗೆ ಬಡಬಡಿಸುತ್ತಿರುವಳೋ ಏನು ? (ಹೀಗೆನ್ನುತ್ತಾ ಮೈಮೇಲೆ ಕೈಯಾಡಿಸಿ):—

॥ ಮತ್ತೇಭವಿಕ್ರೀಡಿತಂ ॥

ಸುಖದುಃಖಂಗಳೊಳಂ ಸಮಾನಮಖಿಲಾವಸ್ಥಾನುಕೂಲಂ ಸುಖಂ ।
ಜಕಮಾಜೀವಕೆ ಮೇಣ್ ಶ್ರಮಾಪಹರಣಂ ಮುಪ್ಪಲ್ಲಿಯುಂ ಸ್ನೇಹವ-॥
ರ್ಧಕಮಾಚ್ಛಾದನೆ ಪೋಗೆ ಕಾಲವಶದಿಂ ಪೂರ್ಣಾನುರಾಗೋಜ್ವಲಂ ।
ಪ್ರಕಟಂ ಭದ್ರಮಿದಪ್ಪುದಾಸು ಪುರುಷಂಗೇತೇಂತೊ, ಸತ್ಪುಣ್ಯದಿಂ ॥ ೩೭ ॥

ದುರ್ಮುಖನು—ದೇವಾ, ಜಯ ಜಯ.

ರಾ—ಈವೊತ್ತು ಪಟ್ಟಣದಲ್ಲಿ ದಾವ ಹೊಸ ಸುದ್ದಿಯನ್ನು ಕೇಳಿದಿ. ಹೇಳು ?

ದುರ್ಮು—ನಗರದಲ್ಲಿಯೂ, ನಾಡಿನಲ್ಲಿಯೂ ಇರುವ ಜನರು ದೊರೆಗಳನ್ನು ಹೊಗಳುತ್ತಾರೆ, ದಶರಥಮಹಾರಾಜನನ್ನು ರಾಮಚಂದ್ರನು ಮರಿಸಿಬಿಟ್ಟನೆಂದು ಸಂತೋಷದಿಂದ ಹಾಡಿ ಹರಿಸುತ್ತಾರೆ.

ರಾ— ಇದು ಹೊಗಳುವಿಕೆಯ ನುಡಿಯು. ಇದರಲ್ಲೇನೂ ಹುರಳಿಲ್ಲ. ನನಗೆ ಏನಾದರೂ ನಿಂದೆಯ ನುಡಿಗಳನ್ನು ಜನರು ಆಡುತ್ತಿದ್ದರೆ ಹೇಳು. ಯಾಕಂದರೆ ಅದನ್ನು ಬೇಗನೆ ಕಳೆದುಕೊಳ್ಳಬೇಕು.

ದು—(ದುಃಖದಿಂದ ಕಣ್ಣುಗಳಲ್ಲಿ ನೀರು ತಂದು) ದೊರೆಗಳ ಅಪ್ಪಣೆಯಾದಲ್ಲಿ ಹೇಳುತ್ತೇನೆ; ಕೇಳಬೇಕು. (ಎಂದು ಕಿವಿಯಲ್ಲೀ ಹೇಳುತ್ತಾನೆ) ಈ ಯೊ ಪ್ರಕಾರದ ಸುದ್ದಿ ಅದೆ.

ರಾ—ಅಹಹ ! ವಿಧಿಯೇ ! ಈ ವಾಕ್ಯರೂಪವಾದ ವಜ್ರಾಸ್ತ್ರವು ಪ್ರಚಂಡ ವೇಗವುಳ್ಳದ್ದದೆ !!! (ಎಂದು ಮೂರ್ಛೆಹೊಂದುತ್ತಾನೆ)

ದು—ದೇವಾ ! ಸಮಾಧಾನವನ್ನು ತಾಳಬೇಕು; ಇಂಥಾ ಸಣ್ಣ ಮಾತಿಗೆ ಎದೆಗುಂದಬಾರದು.

ರಾ—(ಎಚ್ಚೆತ್ತು, ಮಾತಾಡುತ್ತಾನೆ)

॥ ವಸಂತತಿಲಕಂ ॥

ವೈದೇಹಿಗಕ್ಕಟ! ಪರಾಲಯವಾಸದೋಷಂ ।
ಮೈದೋರಬಾರದೆನುತದ್ಭುತಯತ್ನದಿಂದೇ ॥
ಗೈದುಂ ಪ್ರಶಾಂತಿಯನಲರ್ಕದ ನಂಜಿನಂತೇ ।
ನ್ಕೆ? ದೈವದುಷ್ಫಲದಿ ಹಬ್ಬಿತು ಮತ್ತಮೆತ್ತಂ ॥ ೩೮ ॥

ಇದಕ್ಕೆ ದೈವಗೇಡಿಯಾದ ನಾನು ಇನ್ನೇನು ಮಾಡಲಿ ? (ಮತ್ತೆ ಆಲೋಚಿಸುತ್ತಾ ಕರುಣದಿಂದ) ಬಹಳ ಮಾಡಿ ಹೀಗೇ ಮಾಡಬೇಕಾದೀತು —

(ಇಂದ್ರವಜ್ರಾವೃತ್ತಂ)

ಏನಾದೊಡಂ ಕಾರ್ಯವ ಮಾಡಿ ಲೋಕ ।
ಕ್ಕಾನಂದವನ್ನೀವುದೆ ಸಜ್ಜನರ್ಗೆ ॥
ಧ್ಯಾನಂ ವ್ರತಂ; ಪ್ರಾಣವನೆನ್ನುಮಂ ಬಿ ।
ಟ್ಟೇನೋಂತನೀನೋಂಪಿಯನೆಮ್ಮತಾತಂ ॥ ೩೯ ॥

ಮತ್ತೂ ನಮ್ಮ ಗುರುಗಳಾದ ವಶಿಷ್ಠಮಹಾಮುನಿಗಳೂ ಇದೇ ಈಗ ಹೀಗೇ ಹೇಳಿ ಕಳುಹಿದ್ದಾರೆ; ಮತ್ತೇನಂದರೆ:—

ಆದಿತ್ಯವಂಶೋದ್ಭವಭೂಪರಿಂದಾ ।
ದಾದಿವ್ಯಚಾರಿತ್ರ್ಯಕೆ ಬಂದೊಡೆನ್ನಿಂ ॥
ದೀದುಷ್ಟವಾರ್ತಾಶ್ರುತಿ; ತಾನಧನ್ಯಂ ।
ಖೇದಾಸ್ಪದಂ ಧಿಕ್ಕೃತಿಯಿರ್ಕೆ ನಂಗೆ ॥ ೪೦ ॥

ಹಾ ದೇವೀ ! ಹಾ ಸೀತೇ ! ನೀನು—ದೇವಯಜ್ಞದಿಂದ ಹುಟ್ಟಿದವಳಲ್ಲವೇ? ನಿನ್ನ ಜನನಾನುಗ್ರಹದಿಂದ ಭೂಮಿಯನ್ನು ಪವಿತ್ರಮಾಡಿದವಳಲ್ಲವೇ ? ಜನಕರಾಜನವಂಶಕ್ಕೆ ಆನಂದಕೊಡುವವಳಲ್ಲವೇ ? ಅಗ್ನಿಯೂ, ವಶಿಷ್ಠರೂ, ಅರುಂಧತಿಯೂ ನಿನ್ನ ಒಳ್ಳೇ ನಡತೆಯನ್ನು ಹೊಗಳಿಲ್ಲವೇ ? ನೀನು ನನ್ನಲ್ಲೇ ಜೀವವನ್ನಿಟ್ಟವಳಲ್ಲವೇ ? ಮಹಾರಣ್ಯವಲ್ಲಿಯೂ ನನಗೆ ಸುಖವನ್ನು ಕೊಟ್ಟವಳಲ್ಲವೇ? ದಶರಥಮಹಾರಾಯನ ಪ್ರೀತಿಗೆ ಯೋಗ್ಯಳಲ್ಲವೇ ? ನಿಯಮಿತವಾದ ಸವಿನುಡಿಗಳನ್ನಾಡುವವಳಲ್ಲವೇ ? ಇಂಥಾ ನಿನಗೆ ಈ ಪರಿಯ ಪರಿಣಾಮವು ಹ್ಯಾಗಾಯಿತು ? ಅಕಟಕಟಾ !!

॥ ಇಂದ್ರವಜ್ರಾವೃತ್ತಂ ॥

ನಿನ್ನಿಂದೆ ಲೋಕಂಗಳು ಪಾವನಂಗಳ್ !
ನಿನ್ನೊಳ್ ಜನಂ ದೋಷವನಿಟ್ಟುದಯ್ಯೋ ! ॥
ನಿನ್ನಿಂ ಸನಾಥಂ ಭುವನತ್ರಯಂ ಸೀ ।
ಬನ್ನಂಬಡಲ್ ನಿಂತೆ ! ಅನಾಥೆಯಾಗಿ ॥ ೪೧ ॥

( ದುರ್ಮುಖನಿಗೆ ) ಎಲಾ ದುರ್ಮುಖನೇ, ಲಕ್ಷ್ಮಣನ ಬಳಿಗೆ ಹೋಗಿ ( ಕಿವಿಯಲ್ಲೀ ಹೇಳುತ್ತಾನೆ ) ಈ ರೀತಿ ಪ್ರಕಾರವಾಗಿ ನಿಮ್ಮ ನೂತನ ರಾಜನಾದ ರಾಮನು ಅಪ್ಪಣೆ ಕೊಟ್ಟಿದ್ದಾನೆಂದು ಹೇಳು, ನಡಿ.

ದುರ್ಮು—ಬುದ್ಧೀ, ಇದೇನು ? ದುರ್ಜನರ ಮಾತುಗಳಿಂದ ಹಿಂದು ಮುಂದು ನೋಡದೆ, ಬೆಂಕಿಯಿಂದ ಶುದ್ಧರಾಗಿ ಬಂದಂಥ, ತುಂಬಿದ ಬಸುರಿನ ಭಾರವನ್ನು ತಳೆದಂಥ ಸೀತಾದೇವಿಯರ ವಿಷಯದಲ್ಲಿ, ಇಂಥಾ ಅಯೋಗ್ಯವಾದ ಕಾರ್ಯವನ್ನು ಮಾಡಬಹುದೇ? ಇದು ತಕ್ಕದ್ದಲ್ಲೆಂದು ತೋರುತ್ತದೆ.

ರಾ—ಸಾಕು ಸಾಕು ! ಲೋಕದ ಜನರು ಹ್ಯಾಗೆ ದುರ್ಜನರೋ, ತಿಳಿಯದು.

॥ ಮಾಲಿನೀವೃತ್ತಂ ॥

ಅಭಿಮತಮಖಿಲರ್ಗಿಕ್ಷ್ವಾಕುವಂಶಂ ಜನರ್ಗೆ ।
ಪ್ರಭವಿಸಿತಪವಾದಕ್ಕಾಸ್ಪದಂ ದೈವದಿಂದೇ ॥
ಲಭಿಸಿತದಕಮಂದೇ ಅದ್ಭುತಂ ಶಾಂತಿ, ಸ್ವಯಂ ।
ದು, ಜಗವರಿಳೆಗಾರ್ಕೆ ದೂರವೃತ್ತಾಂತವನ್ನು ॥ ೪೨ ॥

ಆದದರಿಂದ ನೀನು ಹೋಗಿ ನಾವು ಹೇಳಿದಂತೆ ಮಾಡು.

ದುರ್ಮು—ಹಾ ದೇವೀ, ಜಾನಕೀ, ಎಲೈ ತಾಯಿ ! ಇನ್ನು ನಿನ್ನ ಗತಿಯು ಏನೋ ! ( ಎಂದು ಹೊರಟುಹೋದನು )

ರಾ—ಅಯ್ಯೋ ಕಷ್ಟವೇ ! ನಾನು ಬಹು ಕ್ರೂರಕರ್ಮಿಯೂ, ಘಾತಕಿಯೂ ಆದೆನಲ್ಲ ?

॥ ವಸಂತತಿಲಕಂ ॥

ಚಿಕ್ಕಂದಿನಿಂ ಸಲಹಿದೀಪ್ರಿಯೆಯಂ ನತಿಪ್ರೇ ।
ಮಕ್ಕೆನೋಡದೆ ಮನಸಿಂ ಬೆರೆದಿರ್ದಳನ್ನು ॥

ತಕ್ಕಿಂದೆ ಕೊಟ್ಟಪೆನು ಮೃತ್ಯುಗೆ; ಸಾಕಿ ತಾನೇ ।
ಹಕ್ಕೀಕೊರಲ್ಗೊರಿವವೊಲ್ ಕಟಕಂ ಕಠೋರಂ ॥ ೪೩ ॥

ಆದದರಿಂದ ಮುಟ್ಟಲಿಕ್ಕೆ ತಕ್ಕವನಲ್ಲದ ಪಾಪಿಯಾದ ನಾನು ಮುಟ್ಟಿ, ದೇವಿಯನ್ನು ಯಾಕೆ ಮೈಲಿಗೆ ಮಾಡಲಿ; (ಎಂದು ಮೆಲ್ಲಗೆ ಸೀತೆಯ ತಲೆಯನ್ನು ಎತ್ತಿ ತೋಳುಗಳನ್ನು ಬಿಡಿಸಿಕೊಂಡು ಮಾತನಾಡುತ್ತಾನೆ.)

ಚಂಡಾಲನಾನತಿವಿಲಕ್ಷಣಕರ್ಮದಿಂ ಕೇಳ್ ।
ಕಂಡ್ಯಾ! ಬಿಡಕ್ಕಟ ಬಿಡೆನ್ನಲೆ ಸತ್ಯಶೀಲೆ! ॥
ಬೆಂಡಾದಿ ದುಷ್ಫಲವನೀವ ವಿಷದ್ರುಮಂ ಶ್ರೀ ॥
ಖಂಡದ್ರುಮೆಂದರಿಯದಾಶ್ರಯಿಸಿರ್ದು, ಮುಗ್ಧೇ ॥ ೪೪ ॥

(ಎದ್ದು ನಿಂತು) ಅಯ್ಯೋ ದೈವವೇ, ಈಗ ನನ್ನ ಪ್ರಾಣಾಂತವು ಒದಗಿತು, ರಾಮನ ಬಾಳಿಕೆಯ ಪ್ರಯೋಜನವು ಇಂದಿಗೆ ತೀರಿತು; ನನ್ನ ಪಾಲಿಗೆ ಈ ಜಗತ್ತು ಶೂನ್ಯವು; ಜೀರ್ಣಾರಣ್ಯದಂತೆ ಕಾಣುತ್ತದೆ; ಸಂಸಾರದ ಸವಿಯು ಹೋಯಿತು; ಶರೀರಕ್ಕೆ ಅತ್ಯಂತ ಕ್ಲೇಶವಾಗುತ್ತದಲ್ಲಾ? ನನಗೆ ಆಶ್ರಯವಂತೂ ಇಲ್ಲವಷ್ಟೆ? ಏನು ಮಾಡಲಿ? ಎಲ್ಲಿ ಹೋಗಲಿ? ಇನ್ನೇನು ಗತಿಯು? ಪ್ರಾಣತ್ಯಾಗವನ್ನಾದರೂ ಮಾಡಬೇಕಂದರೆ, ಅದು ಅಸಾಧ್ಯವಾಗಿದೆ.

॥ ವಸಂತತಿಲಕಂ ॥

ಧಾತಂ ವ್ಯಥಾನುಭವಕಿತ್ತನು ರಾಮನಲ್ಲಿ ।
ಚೈತನ್ಯಮಂ ಹೃದಯಮರ್ಮವಕೊಯ್ಯುತಿರ್ಪಾ ॥
ಈ ತನ್ನಸುಸ್ಥಿರತರಾಸುಗಳಿಂದೆ ಮತ್ತಾ ।
ಚೈತನ್ಯವಾಗಿಹುದು ವಜ್ರವಿಲೇಪಯುಕ್ತಂ ॥ ೪೫ ॥

ಹಾ ತಾಯೀ! ಅರುಂಧತಿಯೇ! ಹಾ ಮಹಾತ್ಮರಾದ ವಶಿಷ್ಠ ವಿಶ್ವಾಮಿತ್ರರೇ! ಹಾ ಮಹಾಮಹಿಮೆಯುಳ್ಳ ಪಾವಕನೇ! ಹಾ ಸಕಲಪ್ರಾಣಿಗಳಿಗೆ ತವರುಮನೆಯಾದ ಭೂದೇವೀ! ಹಾ ಜನಕಮಹಾರಾಜಾ! ಅಯ್ಯೋ ನನ್ನ ತಂದೆತಾಯಿಗಳಿರಾ! ಅಯ್ಯೋ ಪ್ರಿಯಮಿತ್ರನಾದಂಥ ದೊರೆಯೇ, ಸುಗ್ರೀವನೇ! ಎಲೈ ವಿನಯವಂತನಾದ ಮಾರುತಿಯೇ! ಅಯ್ಯೋ ಪರಮೋಪಕಾರಿಯೇ! ಲಂಕೆಯ ದೊರೆಯೇ! ವಿಭೀಷಣಾ! ಅಯ್ಯೋ ಸಖಿಯೇ ತ್ರಿಜಟೇ! ನೀವೆಲ್ಲರೂ ಪುಣ್ಯಶೀಲರಾದುದರಿಂದ ಈ ಕಪಟಿಯಾದ ರಾಮನು ನೆನಿಸಿದರೆ ನಿಮಗೆ ಕುಂದುಹತ್ತೀತು;

ನಿಮ್ಮನ್ನು ತಕ್ಕಿಸಿರುವ ನನ್ನನ್ನು ನೀವು ಕರುಣಾಳುಗಳಾದುದರಿಂದ ಕಾದುಕೊಳ್ಳಿರಿ! ವಿಚಾರದಿಂದ ನೋಡಿದರೆ—ಇವರನ್ನು ಕರೆಯಲಿಕ್ಕೂ ನಾನು ಅಯೋಗ್ಯನು.

॥ ಆರ್ಯಾವೃತ್ತಂ ॥

ನಾನೆ ಕೃತಘ್ನಂ ದುಷ್ಟಂ ।
ಮಾನಿಗಳೆಳೆಪೊಳ್ ಮಹಾತ್ಮರವರವರಾ ॥
ಶ್ರೀನಾಮಂಗಳ ನುಡಿಯಲ್ ।
ತಾನಪ್ಪುದವರ್ಗೆ ಕಲ್ಮಷಸ್ಪರ್ಶಂ ॥ ೪೭ ॥

ಮತ್ತೂ—

॥ ವಸಂತತಿಲಕಂ ॥

ಎನ್ನಕ್ಕರುಳ್ಕರಸಿಯಂಜಿದಳಲ್ತೆ, ನೋಡಿ ।
ಮುನ್ನಿಂದುಚಿತ್ರವನದಿಪ್ಪುದು ಪೂರ್ಣಗರ್ಭಂ ॥
ಎನ್ನಾಲಯಕ್ಕಿವಳಲಂಕೃತಿ ನಿದ್ರಿಸಿರ್ದಳ್ ।
ನನ್ನಾಂಗದಲ್ಲಿ ಸುಖದಿಂ ನೆರೆನಂಬಿ ನೀರೆ ॥ ೪೮ ॥
ಇನ್ನೀಕೆಯಂ ತೊರೆದು ಪೋದಪನೆಂತು? ಹಾಪೋ ।
ಪನ್ನಂ ಪಿಶಾಚಗಣಕಾಹುತಿಯನ್ನು ಚೆಲ್ಲಿ ॥
ಇನ್ನಾರೊ ಭೂತಳದೊಳೆನ್ನನು ಪೋಲ್ವದುಷ್ಟರ್ ।
ತಾನ್ನಿರ್ದಯಂ ಬಹುಭಯಂಕರ ಕರ್ಮದಕ್ಷಂ ॥ ೪೯ ॥

( ಸೀತೆಯ ಚರಣಗಳನ್ನು ತಲೆಯಮೇಲಿಟ್ಟು ) ಎಲೈ ದೇವೀ! ಪುಣ್ಯಶೀಲೇ, ರಾಮನ ತಲೆಯಲ್ಲಿ ನಿನ್ನ ಪಾದಪಂಕಜದ ಕಡೆಯ ಸ್ಪರ್ಶವು ಇದೇ! (ಎಂದು ಅಳುತ್ತಾನೆ)

(ಇಷ್ಟರಲ್ಲಿ ಪಡದೆಯು ಆಚೆಯಿಂದ ಗುಲ್ಲು ಕೇಳಿಸುತ್ತದೆ).

ಅನ್ಯಾಯವು! ಅನ್ಯಾಯವು! ಬಹಳ ಅನ್ಯಾಯವಾಯಿತು.

ರಾ—ಎಲೈ ದಾರಲ್ಲಿ? ಏನದು! ಕೇಳಿರಿ!

(ಮತ್ತೆ ಹಿಂದೆ ಶಬ್ದವಾಗುತ್ತದೆ)

॥ ವಸಂತತಿಲಕಂ ॥

ಏ ಸತ್ಯಸಂಧ ಶರಣಾಗತಪಾಲ ನಮ್ಮಾ- ।
ವಾಸಂಗಳುಂಟು ಯಮುನಾತಟದಲ್ಲಿ ರಾಮಾ, ॥

ತ್ರಾಸಂಗೊಡಲ್ ಲವಣದೈತ್ಯನು ತಾಪಸೇಂದ್ರರ್ ।
ಬೇಸತ್ತು ಬಂದೆವವನೀಪತಿ ಪಾಲಿಸಯ್ಯಾ ॥ ೪೯ ॥

ರಾ—ಏನು? ಇನ್ನೂ ಪೃಥ್ವಿಯಲ್ಲಿ ರಾಕ್ಷಸರ ಹಾವಳಿಯು ತಪ್ಪದೆ? ಈ ದುರಾತ್ಮನಾದ ಕುಂಭೀನಸೀಪುತ್ರನನ್ನು ನಿರ್ನಾಮಮಾಡಲಿಕ್ಕೆ ಶತ್ರುಘ್ನನನ್ನು ನೇಮಿಸುತ್ತೇನೆ. (ಎಂದು ಕೆಲವು ಹೆಜ್ಜೆಗಳನ್ನು ಮುಂದಿಟ್ಟು ಮತ್ತೂ ತಿರುಗಿ)—— ಹಾ ದೇವೀ ಜಾನಕೀ! ಇಂಥಾ ನೀನು ಹ್ಯಾಗೆ ವನಕ್ಕೆ ಹೋದೀ? ನಿನ್ನ ಗತಿಯು ಏನಾಗುವದೋ! ಎಲೈ ಭಾಗ್ಯಶಾಲಿನೀ ಭೂದೇವೀ, ಈ ನಿನ್ನ ಲೋಕಮಾನ್ಯೆಯಾದ ಮಗಳ ಕಡೆಗೆ ಅಂತಃಕರುಣದಿಂದ ನೋಡು!

॥ ವಸಂತತಿಲಕಂ ॥

ಭೂಪಾಲಕರ್ಗೆ ರಘುಮೈಥಿಲಗೋತ್ರಜರ್ಗೆ ।
ಶ್ರೀಪೂರ್ಣಮಂಗಲವ ಸುಂದರಮೂರ್ತಿಯನ್ನು ॥
ಈ ಪುಣ್ಯಶೀಲೆಯ ಪವಿತ್ರೆಯ ಸೀತೆಯಂ ಕೇ ।
ಳೌ ಪೃಥ್ವಿ ದೇವಮುಖದೊಳ್ ಪಡಿದಿರ್ಪೆ ನೀನು ॥ ೫೦ ॥

(ಹೀಗೆಂದು ಹೊರಟು ಹೋಗುತ್ತಾನೆ.)

ಸೀ—(ಕನಸಿನಲ್ಲಿ) ಅಯ್ಯೋ ವಿನಯಶೀಲರೇ, ಪ್ರಾಣನಾಥರೇ, ಎಲ್ಲಿದ್ದೀರಿ? (ಒಮ್ಮಿಂದೊಮ್ಮೆ ಎದ್ದು ಕೂಡ್ರುತ್ತಾಳೆ) ಅಹಹ! ನಾನು ಕೆಟ್ಟಕನಸಿನಿಂದ ಬೆದರಿ ವಿರಹಿಣಿಯಂತೆ ಸುಮ್ಮನೆ ಆರ್ಯಪುತ್ರರನ್ನು ಕರಿಯುತ್ತೇನೆ, (ಚನ್ನಾಗಿ ಎಚ್ಚತ್ತು) ಅಕಟಕಟಾ !! ಕನಸು ಸುಳ್ಳಲ್ಲ, ನಿಜವಾಯಿತು. ಮಲಗಿರುವ ನನ್ನೊಬ್ಬಳನ್ನೇ ಬಿಟ್ಟು ಪ್ರಾಣದೊಡೆಯರು ಹೋದರಲ್ಲವೇ? ಇಂಥಾ ಕೆಲಸವು ಪ್ರಿಯರಿಂದ ಹ್ಯಾಗಾಗಿದ್ದೀತು? ಒಳ್ಳೇದು; ಮತ್ತೆ ಅವರನ್ನು ಕಂಡಾಗ ನಾನು ಸಿಟ್ಟು ಮಾಡುವೆನು; ಆದರೆ ಅದಾದರೂ ನನ್ನಿಂದ ಆಗದ ಮಾತೇ, ದಾರಲ್ಲಿ? ಯಾರಾದರೂ ಸೇವಕರುಂಟೇ? (ದಾರೂ ಮಾತಾಡುವದಿಲ್ಲ)

॥ ಶಾರ್ದೂಲವಿಕ್ರೀಡಿತಂ ॥

ಪೊತ್ತುಂ ಪೋಗದು ಚಿತ್ತಕಾಗದು ಸಮಾಧಾನಂ ಸಖಂಬಿಟ್ಟನಂ ।
ನೆತ್ತಂ ಪೋದನೊ ಕಾಣದಾದನು ವಿಯೋಗಕ್ಲೇಶಮಂ ಜೀವನ ॥
ಕ್ಕೆತ್ತಿಂನೆಂದಿಗೆ ಕಾಣ್ಬೆನಾನಗೆಯೊಳೊಪ್ಪುತ್ತಿರ್ಪನಾಸ್ಯಾಬ್ಜಮಂ ।
ಮತ್ತಾನೀರನ ಸೌಖ್ಯಸಾರನ ಕೃಪಾಪೂರಕ್ಕದೆಂತೈದುವೆಂ॥ ೫೧ ॥

(ಮತ್ತೊಮ್ಮೆ ಕರೆಯುತ್ತಾಳೆ) ದಾರಲ್ಲಿ?

ದುರ್ಮು—ಅಮ್ಮಾ ದೇವಿಯರೇ, ರಥವು ಸಿದ್ಧವಾಗಿ ಬಂದದೆ, ತಾವು ಬಂದು ಹತ್ತಬೇಕೆಂದು ಕುಮಾರ ಲಕ್ಷ್ಮಣನು ಬಿನ್ನವಿಸುತ್ತಾನೆ.

ಸೀ—ಇಗೋ, ಬಂದೆ ನೋಡು. ನನ್ನ ಗರ್ಭವು ಬಹಳ ಚಂಚಲವಾಗುತ್ತದೆ, ಭಾರವನ್ನು ತಾಳಲಾರೆನು, ಕಾರಣ ಮೆಲ್ಲಗೆ ನಡಿದು ಬರುತ್ತೇನೆ.

ದುರ್ಮು—ತಾಯಿ, ಸಾವಕಾಶವಾಗಿ ಇತ್ತ ಬನ್ನಿ, ಇದೇ ರಥವು; ಮೇಲೆ ಹತ್ತಿ ಕೂಡ್ರಬೇಕು.

ಸೀ—(ರಥದಲ್ಲಿ ಕೂಡ್ರುವಾಗ) ಈಗ ತಪೋಧನರಾದ ಮುನಿಗಳಿಗೆ ನಮಸ್ಕಾರವು, ಪ್ರಾಣದೊಡೆಯರ ಚರಣಕಮಲಗಳಿಗೆ ಪುನಃ ಪುನಃ ನನ್ನ ನಮಸ್ಕಾರವು; ಹಾಗೂ ಯಾವತ್ತೂ ಗುರುಜನರಿಗೂ ನನ್ನ ಪ್ರಣಾಮವಿರಲಿ. (ಹೀಗೆ ಎಲ್ಲರೂ ಹೊರಟು ಹೋಗುತ್ತಾರೆ).



ಚಿತ್ರದರ್ಶನವೆಂಬ ಮೊದಲನೆಯ ಅಂಕವು

—* **ಸಂಪೂರ್ಣವು.** *—



# ಉತ್ತರ ರಾಮಚರಿತ್ರ ನಾಟಕವು.

## ೨ ನೇ ಅಂಕವು.

(ಪರದೆಯಲ್ಲಿ ಶಬ್ದವಾಗುತ್ತದೆ.)

ಬನ್ನಿರಮ್ಮಾ ಬನ್ನಿರಿ ! ತಪಃಸೌಭಾಗ್ಯವತಿಯರು ಬಂದದ್ದು ಒಳ್ಳೇದಾಯಿತು.

ತಾಪಸಿ—ಓಹೋ ! ಇವಳು ವನದೇವತೆಯು; ಫಲಕುಸುಮಪಲ್ಲವಾರ್ಘ್ಯಗಳನ್ನು ತಕ್ಕೊಂಡು ನನ್ನನ್ನು ಪೂಜಿಸಲಿಕ್ಕೆ ಬರುತ್ತಾಳೆ.

ವನದೇವಿ—(ಪೂಜಾಸಾಮಗ್ರಿಗಳಿಂದ ಪೂಜಿಸಿ ಅರ್ಘ್ಯಗಳನ್ನ ಕೊಟ್ಟು ಮಾತಾಡುತ್ತಾಳೆ.)

( ಮತ್ತೇಭ )

ಎಮಗೀವೊತ್ತು ಸುವಾಸರಂ ಸುಜನಸಂಗಂ ಸಜ್ಜನರ್ಗಪ್ಪುದು ।
ಘನಪುಣ್ಯಂ ಬಹುದುರ್ಲಭಂ; ತಮಗೆ ಬೇಕಾದಂತೆ ತವೀಗಳ್ ॥
ವನಮಂ ಭೋಗಿಸಿರಮ್ಮ, ಪರ್ಣಶಾಲೆಗಳುಂಟಲ್ಲೇ, ತಪೋಯೋಗ್ಯಭೋ ।
ಜನವಾಗಿರ್ಪವು ಕಂದಮೂಲಸುಫಲಂಗಳ್, ತಮ್ಮದೀ ಕಾನನಂ. ॥ ೧ ॥

ತಾಪಸಿ—ಹೌದಮ್ಮಾ ! ಈ ವಿಷಯದಲ್ಲಿ ನೀವು ಹೇಳತಕ್ಕದ್ದೇನದೆ—

( ತರಳವೃತ್ತಂ )

ಜನಮನೋಹರವರ್ತನಂ, ಹಿತವುಪ್ಪ ನಲ್-ಸವಿ-ವಾತು, ದೂ ।
ಷಣವನಡದ ನೇಹಮುಂ ಕುಶಲಪ್ರಭಾವಲಸನ್ಮತಿ ॥
ಪ್ರಣಯಪೂರಿತಮಾವಗಂ ಬಹಿರಂತರಂಗಗಳಲ್ಲಿ ಸಜ್ ।
ಜನರ-ಗುಪ್ತಚರಿತ್ರಮಿಂತಿದಕ್ಕೆತವಂ ಶುಚಿಯೊಪ್ಪುಗುಂ ॥ ೨ ॥

( ಹೀಗೆ ಮಾತಾಡುತ್ತಾ ಇಬ್ಬರೂ ಕೂತುಕೊಳ್ಳುತ್ತಾರೆ )

ವನದೇವಿ—ತಾವು ದಾರಮ್ಮಾ, ತಮ್ಮ ಹೆಸರೇನು ? ತಿಳಿಯಬೇಕೆಂಬ ಕುತೂಹಲವಾಗಿದೆ.

ತಾಪಸಿ—ನನ್ನನ್ನು 'ಆತ್ರೇಯಿ' ಎಂದು ಕರೆಯುತ್ತಾರೆ

ವನದೇವಿ—ಆತ್ರೇಯಕ್ಕಾ, ತಾವು ಎಲ್ಲಿಂದ ಬಂದಿರಿ ? ಮತ್ತೂ ಈ ದಂಡಕಾರಣ್ಯದಲ್ಲಿ ತಮ್ಮ ಕೆಲಸವೇನು?

ಆತ್ರೇಯಿ—ಹೇಳುತ್ತೇನೆ:—

|| ವಸಂತತಿಲಕಂ ||

ಈ ತಾಣದಲ್ಲಿ ಹಲವೇಕರು ಸಾಮಗಾನ— ।
ಜ್ಞಾತಾರರಾ ದ್ವಿಜರಗಸ್ತ್ಯಮುನೀಂದ್ರಮುಖ್ಯರ್ ॥
ಇತಂದೆನೋದಲವರಿಂ ನಿಗಮಾಂತವಂ ಕೇ— ।
ಳೌ ತಂಗಿ, ಆದಿಕವಿಯಾಶ್ರಮದತ್ತಣಿಂದೆ ॥ ೩ ॥

ವನದೇವಿ—ಅಕ್ಕಾ, ಇದೊಂದು ಸೋಜಿಗವು. ವಾಲ್ಮೀಕಿಯು ಪುರಾತನಮುನಿಯು, ಬ್ರಹ್ಮಜ್ಞಾನಿಯು, ಎಂದು ಎಲ್ಲ ತಪಸ್ವಿಗಳು ವೇದಪಠಣಕ್ಕಾಗಿ ಆತನನ್ನೇ ಆಶ್ರಯಿಸಿರುವರು; ಹೀಗಿದ್ದು ತಾವು ಈ ದೂರಪ್ರವಾಸದ ಕಷ್ಟವನ್ನು ಯಾತಕ್ಕೆ ಸ್ವೀಕರಿಸಿದಿರಿ?

ಆತ್ರೇಯಿ—ಅಲ್ಲಿ ಅಧ್ಯಯನಕ್ಕೆ ದೊಡ್ಡ ಅಡ್ಡಿಯುಂಟಾಗಿದೆ.

ವಾಸಂತಿ—ಅಂಥಾ ಅಡ್ಡಿಯಾವದು.

ಆತ್ರೇಯಿ—ಒಬ್ಬಾನೊಬ್ಬ ದೇವತೆಯು ಎಲ್ಲಾ ರೀತಿಗಳಿಂದ ಅದ್ಭುತವಾದ, ಮೊಲೆಕುಡಿಯುದನ್ನು ಬಿಡುವವಷ್ಟೇ ವಯಸ್ಸುಳ್ಳ ಅವಳಿಮಕ್ಕಳನ್ನು ಮಹಾನುಭಾವರಾದ ವಾಲ್ಮೀಕಿಮುನಿಗಳಿಗೆ ತಂದುಕೊಟ್ಟಳು; ಆ ಕುಮಾರಕರು ಕೇವಲ ಮುನಿಗಳ ಚಿತ್ತದಲ್ಲೇ ಅಲ್ಲ, ಎಲ್ಲ ಪ್ರಾಣಿಗಳ ಅಂತಃಕರಣದಲ್ಲಿ ಪ್ರೇಮವನ್ನು ಉಂಟುಮಾಡುವಂಥವರಾಗಿದ್ದಾರೆ.

ವಾಸಂತಿ—ಅಕ್ಕಾ, ಆ ಬಾಲಕರ ಹೇಸರುಗಳೇನು? ಗೊತ್ತುಂಟೆ?

ಆತ್ರೇಯಿ—ಆ ದೇವಿಯೇ ಕುಶಲವರೆಂದು ಆ ಕೂಸುಗಳ ಹೆಸರುಗಳನ್ನೂ, ಪ್ರಭಾವವನ್ನೂ ಹೇಳಿರುತ್ತಾಳೆ.

ವಾಸಂತಿ—ಅವರ ಪ್ರಭಾವವು ಯಾವಪ್ರಕಾರದ್ದು?

ಆತ್ರೇಯಿ— ಆ ಹುಡುಗರಿಗೆ ರಹಸ್ಯವಾಗಿರುವ ಜೃಂಭಕಾಸ್ತ್ರಗಳು ಹುಟ್ಟುತ್ತಲೇ ಸಿದ್ಧವಾಗಿರುವವಂತೆ !

ವಾಸಂತಿ—ಔವಯ್ಯಾ ಇದು ಬಲುವಿಚಿತ್ರವು.

ಆತ್ರೇಯಿ—ವಾಲ್ಮೀಕಿಮುನಿಗಳು ವಾತ್ಸಲ್ಯದಿಂದ ಎರಡನೇ ತಾಯಿಯಾಗಿ, ಆ ಕೂಸುಗಳ ಪಾಲನಪೋಷಣಗಳನ್ನು ಮಾಡಿ, ಗುರುಗಳಾಗಿ ಚೌಲಕರ್ಮವನ್ನು ತೀರಿಸಿ, ಬಳಿಕ ಅವರಿಬ್ಬರಿಗೆ ವೇದತ್ರಯವನ್ನು ಬಿಟ್ಟು ಸಕಲವಿದ್ಯೆಗಳನ್ನು ಸಾಂಗೋಪಾಂಗವಾಗಿ ಹೇಳಿಕೊಟ್ಟರು ; ಅನಂತರದಲ್ಲಿ ಹುಟ್ಟಿದ ಹನ್ನೊಂದನೇ ವರ್ಷಕ್ಕೆ ಕ್ಷತ್ರಿಯರಿಗೆ ತಕ್ಕ ವಿಧಾನಗಳಿಂದ ಉಪನಯನಗಳನ್ನು ಮಾಡಿ, ಅವರನ್ನು ವೇದತ್ರಯಪಾರಂಗತರನ್ನು ಮಾಡಿದರು. ಇಂಥಾ ಅತಿಪ್ರದೀಪ್ತಬುದ್ಧಿಶಾಲಿಗಳಾದ ಆ ಇಬ್ಬರ ಕೂಡ ಅಧ್ಯಯನವನ್ನು ಮಾಡುವ ಯೋಗ್ಯತೆಯು ನಮ್ಮಂಥವರಿಗೆ ಇರುವದಿಲ್ಲ:—

( ಮಾಲಿನಿ )

ಗುರು ಸರಿಯುನೆ ಪೇಳ್ವಂ ಪ್ರಾಜ್ಞಗಂ ಮಂದನೋದಂ ।
ನರುಹಿಗವರ, ಸಾಮರ್ಥ್ಯಂಗೊಡಂ ಕುಂದಿಸಂ ಮೇಣ್ ॥
ಪರಿಣತಿಯೊಳು ಭೇದಂ ತೋರ್ಪುದಾದರ್ಶದಲ್ಲಿ ।
ಮೆರೆವವೊಲುಪಬಿಂಬಂ ತೋರದೌ ಹಂಚಿನಲ್ಲಿ ॥ ೪ ॥

ವಾಸಂತಿ— ಇದೇ ನಿಮ್ಮ ಅಧ್ಯಯನಕ್ಕೆ ಅಡ್ಡಿಯೇನು?

ಆತ್ರೇಯಿ— ಇನ್ನೊಂದುಂಟು.

ವಾಸಂತಿ— ಅಕ್ಕಾ, ಅದೇನು ಮತ್ತೆ?

ಆತ್ರೇಯಿ— ಒಂದಾನೊಂದು ದಿವಸದಲ್ಲಿ ಮಧ್ಯಾಹ್ನದ ಕಾಲಕ್ಕೆ ಬ್ರಹ್ಮರ್ಷಿಯಾದ ಆ ವಾಲ್ಮೀಕಿಯು ನಿತ್ಯಕರ್ಮಕ್ಕೆ ತಮಸಾನದೀತೀರಕ್ಕೆ ಹೋಗಿರುವಾಗ ಅಲ್ಲಿ ಆಡುತ್ತಿರುವ ಕ್ರೌಂಚಪಕ್ಷಿಗಳ ಮಿಥುನದಲ್ಲಿ ಒಂದೇ ಹಕ್ಕಿಯನ್ನು ಒಬ್ಬ ಬೇಡನು ಹೊಡೆದದ್ದನ್ನು ನೋಡಿದನು; ಆ ಗಳಿಗ್ಗೆ ಆ ಮುನಿಯ ಮುಖದಿಂದ ಒಮ್ಮಿಂದೊಮ್ಮೆ ಅನುಷ್ಟುಪಛಂದೋರೂಪದಿಂದ ವಾಗ್ದೇವಿಯು ಈ ಪ್ರಕಾರವಾಗಿ ಹೊರಬಿದ್ದಳು.

ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ ॥
ಯತ್ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಂ ॥ ೧ ॥

ಈ ಶ್ಲೋಕದ ತಾತ್ಪರ್ಯವೇನೆಂದರೆ:—

ಎಲೈ ಬೇಡನೇ, ನೀನು ಕಾಮಾಸಕ್ತಗಳಾದ ದಂಪತಿಹಕ್ಕಿಗಳಲ್ಲಿ ಒಂದನ್ನೇ ಕೊಂದು ಹೆಣ್ಣುಹಕ್ಕಿಗೆ ದುಃಖವನ್ನು ಉಂಟುಮಾಡಿದ ಕಾರಣ ಬಹುಕಾಲದ ವರೆಗೆ ಪ್ರತಿಷ್ಠೆಯನ್ನು ಹೊಂದಬೇಡ.

ವಾಸಂತಿ— ಇದೊಂದು ಆಶ್ಚರ್ಯವು! ವೇದವಾಣಿಯಲ್ಲಿ ಛಂದಸ್ಸುಗಳುಂಟೆಂದು ನಾನು ಬಲ್ಲೆನು, ಆದರೆ ವ್ಯವಹಾರದ ಮಾತಿನಲ್ಲಿ ಇದು ಹೊಸದಾದ ಛಂದಸ್ಸಿನ ಅವತಾರವೇ ಆಯಿತು!!

ಆತ್ರೇಯಿ— ಆದದರಿಂದ ಅದೇ ಕ್ಷಣದಲ್ಲಿ ಭಗವಾನ್ ಭೂತಭಾವನನಾದಂಥ ಬ್ರಹ್ಮನು—ಶಬ್ದಬ್ರಹ್ಮಪ್ರಕಾಶವುಳ್ಳ ಆ ಮಹರ್ಷಿಗೆ ಪ್ರತ್ಯಕ್ಷನಾಗಿ— " ಎಲೈ ಮುನಿಯೇ, ನೀನು ವಾಕ್ಯಬ್ರಹ್ಮದಲ್ಲಿ ಪ್ರವೀಣನಾದಿ, ಆದದರಿಂದ ರಾಮಚರಿತ್ರವನ್ನು ವರ್ಣಿಸು; ನಿನ್ನ ಜ್ಞಾನದೃಷ್ಟಿಯು ಅಬಾಧಿತವಾದ ತಪೋಜ್ಯೋತಿಯಿಂದ ಹೊಳೆಯುತ್ತಿರಲಿ, ನೀನು ಆದಿಕವಿಯೆಂದು ಹೆಸರಾಗು " ಎಂದು ಮಾತಾಡಿ ಕಾಣದಂತಾದನು. ಆ ಬಳಿಕ ಪ್ರಾಚೇತಸಮುನಿಯು ಮನುಷ್ಯಲೋಕದಲ್ಲಿ ಶಬ್ದಬ್ರಹ್ಮದಪರಿಣಾಮರೂಪವಾದ ರಾಮಾಯಣದ ಇತಿಹಾಸವನ್ನು ರಚಿಸಿದನು. ಈಗ ಅವರ ಚಿತ್ತವೆಲ್ಲಾ ಅತ್ತಕಡೆಗೇ ಇರುತ್ತದೆ.

ವಾಸಂತಿ— ಭಲೆ ಭಲೆ! ಹಾಗಾದರೆ ಅವರ ಉದ್ಯೋಗವು ಬಹಳವಾಗಿ ಬೆಳೆದದೆ.

ಆತ್ರೇಯಿ— ಅದಕ್ಕಂತೇ ನಾನು ಹೇಳಲಿಲ್ಲವೇ ? ಅಲ್ಲಿ ಅಧ್ಯಯನಕೆ ದೊಡ್ಡ ಅಡ್ಡಿಯುಂಟೆಂದು.

ವಾಸಂತಿ— ಈಗ್ಗೆ ಮಾತ್ರ ಎಲ್ಲಾ ಸರಿಯಾಗಿ ತಿಳಿಯಿತು.

ಆತ್ರೇಯಿ— ತಂಗೀ, ನನ್ನ ದಣಿವು ಹೋಯಿತು; ಇನ್ನು ಅಗಸ್ತ್ಯಾಶ್ರಮದ ಹಾದಿಯನ್ನು ತೋರಿಸು.

ವಾಸಂತಿ— ಇಲ್ಲಿಂದ ಪಂಚವಟಿಗೆ ಹೋಗಿ, ಈ ಗೋದಾವರಿಯ ತೀರವನ್ನು ಹಿಡಿದು ನೆಟ್ಟಗೆ ನಡಿ. ಅಂದರೆ ಅಗಸ್ತ್ಯಾಶ್ರಮಕ್ಕೆ ಹೋಗುತ್ತೀ.

ಆತ್ರೇಯಿ— ( ಕಣ್ಣುಗಳಲ್ಲಿ ನೀರು ತಂದು ) ಇದೇ ಆ ತಪೋವನವೇ ? ಇದೇ ಪ್ರಸ್ರವಣಗಿರಿಯೇ ? ಇದೇ ಪಂಚವಟಿಯೇ ? ಇದೇ ಗೋದಾವರೀನದಿಯೇ ? ಹಾಗು ನೀನೇ ಜನಸ್ಥಾನವಾಸಿನಿಯಾದಂಥ ವಾಸಂತಿಯೆಂಬ ಹೆಸರುಳ್ಳ ವನದೇವಿಯೇ ?

ವಾಸಂತಿ— ಹೌದು, ಇದೆಲ್ಲಾ ಸತ್ಯವು.

ಆತ್ರೇಯಿ— ಎಲೇ ಮಗಳೇ ಜಾನಕೀ, ಇವೆಲ್ಲಾ ನಿನ್ನ ಮಿತ್ರಮಂಡಲಿಯು; ಆದವರಿಂದ:—

॥ ವಸಂತತಿಲಕಂ ॥

ನೀನಿರ್ದಕುಂಜವನವೃಕ್ಷಗಿರಿಪ್ರದೇಶಂ ।
ನೀನಾಡಿದೀ ಹೊಳೆ, ಮಳಲ್, ವನದೇವಿ ಸೀತೇ! ॥
ಈ ನಮ್ಮ ಪ್ರೀತಿಗವಲೋಕನಕ್ಕಿದೆ ತಾಯೇ! ।
ನೀನಿರ್ಪೆಯೋ, ಎನಿಸುತಿರ್ಪವೆ ನಾಮಶೇಷೆ ॥ ೫ ॥

ವಾಸಂತಿ— (ಅಂಜಿಕೆಯಿಂದ ತನ್ನೊಳಗೇ) ಏನುಕಾರಣ ನಾಮಶೇಷೆಯೆಂದು ನುಡಿದಿದ್ದಾಳು? (ವ್ಯಕ್ತವಾಗಿ) ಅಕ್ಕಾ, ಸೀತಾದೇವಿಯ ಜೀವಕ್ಕೆ ಯಾವ ಮಹಾಭೀತಿಯುಂಟಾಗಿದೆ?

ಆತ್ರೇಯಿ— ತಂಗೀ, ಏನು ಹೇಳಲಿ! ಭೀತಿಮಾತ್ರವೇ ಅಲ್ಲ, ಲೋಕಾಪವಾದವೂ ಬಂದಿರುತ್ತದೆ.

ವಾಸಂತಿ— ಅಕ್ಕಾ, ಅದೇನು? ಹೇಳಿರಿ ಬೇಗನೆ.

ಆತ್ರೇಯಿ— (ಕಿವಿಯಲ್ಲೀ ಹೇಳುತ್ತಾಳೆ) ಈ ಈ ಪ್ರಕಾರ.

ವಾಸಂತಿ— ಅಹಹ!! ದೈವದ ಹೊಡತವು ದಾರುಣವಾಗಿದೆ. (ಎಂದು ಮೈಮರೆಯುತ್ತಾಳೆ)

ಆತ್ರೇಯಿ— ತಂಗೀ, ವಾಸಂತಿ ಏಳಮ್ಮಾ ಏಳು.

ವಾಸಂತಿ— (ಎಚ್ಚತ್ತು) ಹಾ ಪ್ರಿಯಸಖೀ! ಹಾ ಮಹಾಭಾಗ್ಯಶಾಲಿನೀ ಜಾನಕಿ! ನೀನು ಹುಟ್ಟಿ ಇಂಥಾ ಘೋರ ಪರಿಣಾಮವನ್ನು ಅನುಭವಿಸಬೇಕೆಂದು ವಿಧಿಯು ಬರೆದನೇ! ಅಯ್ಯೋ ! ರಾಮಭದ್ರಾ ! ನೀನಾದರೂ ಹೀಗೆ ಮಾಡಬಹುದೇ ! ಒಳ್ಳೇದು, ಏನುಮಾಡೀ ? ಅವಳ ದೈವವೇ ಆಕೆಯ ಮೇಲೆ ತಿರುಗಿ ಬಿದ್ದದೆ. ಅಕ್ಕಾ ಆತ್ರೇಯಿಯೆ, ಲಕ್ಷ್ಮಣನು ಸೀತಾದೇವಿಯನ್ನು ಆ ಅಡವಿಯಲ್ಲಿ ಬಿಟ್ಟು ಹೋದಬಳಿಕ ಏನು ಗತಿಯಾದಳೋ. ನಿನಗೆ ಗೊತ್ತುಂಟೇ?

ಆತ್ರೇಯಿ— ಇಲ್ಲಮ್ಮಾ ಇಲ್ಲ.

ವಾಸಂತಿ— ಅಯ್ಯೋ!! ಬಹಳ ಕೇಡಾಯಿತು. ಪ್ರಾಜ್ಞಳಾದ ಅರುಂಧತಿಯೂ ವಶಿಷ್ಠಗುರುಗಳೂ ಜಾಗ್ರತೆಯಿಂದ ಕಾಪಾಡುತ್ತಿರಲಾಗಿಯೂ, ರಾಮಭದ್ರನ ಮುಪ್ಪಿನ ತಾಯಂದಿರು ಜೀವಂತರಾಗಿರಲಾಗಿಯೂ, ಇಂಥಾ ಅನುಚಿತ ಕೃತ್ಯವು ಹ್ಯಾಗೆ ಸಂಭವಿಸಿತು?

ಆತ್ರೇಯಿ— ಆಗ ಈ ಗುರುಜನರೆಲ್ಲಾ ರುಷ್ಯಶೃಂಗರ ಆಶ್ರಮದಲ್ಲಿದ್ದರಂತೆ; ಈಗ ಅವರ ದ್ವಾದಶವಾರ್ಷಿಕಯಾಗವು ಮುಗಿದ ಕಾರಣ ರುಷ್ಯಶೃಂಗ

ಮುನಿಗಳು ಅವರಿಗೆ ಪೂಜಾ ಸತ್ಕಾರಗಳನ್ನು ಮಾಡಿ, ಅಪ್ಪಣೆಕೊಟ್ಟರು. ಬಳಿಕ ಮಹಾನುಭಾವಳಾದ ಅರುಂಧತಿಯು, ಮಗಳು ಜಾನಕಿಯಿಲ್ಲದ ಅಯೋಧ್ಯೆಗೆ ನಾನು ಹೋಗುವದಿಲ್ಲೆಂದು ನುಡಿದಳು; ಅದನ್ನೇ ರಾಮನ ತಾಯಂದಿರು ಸ್ವೀಕರಿಸಿದರು ; ಅವರಂತೇ ಭಗವಾನ್ ವಶಿಷ್ಠರು—“ ಹಾಗಾದರೆ ನಾವು ಕೆಲವು ದಿವಸಗಳವರೆಗೆ ವಾಲ್ಮೀಕಿಮುನಿಗಳ ಆಶ್ರಮದಲ್ಲಿರೋಣ ” ಎಂದು ಹೇಳಿದರಂತೆ.

ವಾಸಂತಿ—ಒಳ್ಳೇದು ಈಗ ಆ ರಾಜನು ದಾವಕಾರ್ಯದಲ್ಲಿ ಆಸಕ್ತನಾಗಿದ್ದಾನೆ ?

ಆತ್ರೇಯಿ—ಅಶ್ವಮೇಧಯಾಗವನ್ನು ಮಾಡತೊಡಗಿದ್ದಾನೆ!

ವಾಸಂತಿ— ಅಯ್ಯೋ ! ಅಯ್ಯೋ ! ಎರಡನೇ ಸಂಬಂಧವನ್ನು ಮಾಡಿಕೊಂಡನಲ್ಲವೇ ರಾಮನು !

ಆತ್ರೇಯಿ—ಹಾ! ಒಳಿತನ್ನು. ಇಂಥಾ ಮಾತು ಹ್ಯಾಗಾದೀತು.

ವಾಸಂತಿ—ಹಾಗಾದರೆ ಯಜ್ಞದಲ್ಲಿ ಧರ್ಮಪತ್ನಿಯಾರು ?

ಆತ್ರೇಯಿ—ಸುವರ್ಣಮಯವಾದ ಸೀತಾ ಪ್ರತಿಮೆಯು.

ವಾಸಂತಿ—ಔವಯ್ಯಾ ! ಏನು ವಿಲಕ್ಷಣ ಕೆಲಸವಿದು ?

|| ಇಂದ್ರವಜ್ರಾ ||

ದಾವಂ ಮಹಾಪೂರುಷರಾ ಮನೋಂತರ್—।
ಭಾವಂಗಳಂ ಬಲ್ಲನೊ; ವಜ್ರದಿಂದಾ ॥
ತಾವೇ ಕಠೋರಂಗಳು; ಕೋಮಲಂಗಳ್ ।
ಪೂವಿಂದೆಯುಂ ಲೋಕವಿಲಕ್ಷಣಂಗಳ್ ॥ ೬ ॥

ಆತ್ರೇಯಿ—ಆ ಯಾಗದಲ್ಲಿ ವಾಮದೇವನಿಂದ ಮಂತ್ರಿಸಲ್ಪಟ್ಟು ಶುದ್ಧವಾದ ಕುದುರೆಯು ಬಿಡಲ್ಪಟ್ಟಿದೆ; ಅದಕ್ಕೆ ಶಾಸ್ತ್ರದ ಪ್ರಕಾರ ಕಾವಲುಗಾರರನ್ನು ನಿಯಮಿಸಿದ್ದಾರೆ; ದಿವ್ಯ ಶಸ್ತ್ರಾಸ್ತ್ರಪ್ರವೀಣನೆನಿಸಿದ ಲಕ್ಷ್ಮಣ ಕುಮಾರನಾದ ಚಂದ್ರಕೇತುವು ಚತುರಂಗಸೇನಾಸಾಧನೆಯೊಡನೆ ಮುಖ್ಯಾಧಿಪತಿಯಾಗಿ ನಿಯಮಿಸಿ ಕಳುಹಲ್ಪಟ್ಟಿದ್ದಾನೆ.

ವಾಸಂತಿ—(ಪ್ರೇಮಾಶ್ರುಗಳಿಂದಲೂ, ಕೌತುಕದಿಂದಲೂ ಯುಕ್ತಳಾಗಿ) ಕುಮಾರ ಲಕ್ಷ್ಮಣನಿಗಾದರೂ ಮಗನಾಗಿದ್ದಾನೆ ಇಷ್ಟೇ ಸಾಕು ! ಮನಸಿಗೆ ಸಮಾಧಾನವಾಯಿತು !

ಆತ್ರೇಯಿ—ಇಷ್ಟರಲ್ಲಿ ಒಬ್ಬ ಬ್ರಾಹ್ಮಣನು ತನ್ನ ಸತ್ತಮಗನನ್ನು ರಾಜದ್ವಾರದಲ್ಲಿ ತಂದು ಚೆಲ್ಲಿ, ಎದೆಯೆದೆ ಬಡಿದುಕೊಂಡು, "ಅನರ್ಥವಾಯಿತು ಅನ್ಯಾಯವಾಯಿತು" ಎಂದು ಮೊರೆಯಿಟ್ಟನು. ಅದನ್ನು ಕೇಳಿ ಶ್ರೀರಾಮನು ಕರುಣಾಮಯನಾಗಿ ಅರಸಿನ ತಪ್ಪಿಲ್ಲದೆ, ಪ್ರಜೆಗಳಲ್ಲಿ ಅಕಾಲಮೃತ್ಯು ಬರಲಾರದೆಂದು ವಿಚಾರದಲ್ಲಿರುವಾಗ ಒಮ್ಮಿಂದೊಮ್ಮೆ ಅಶರೀರವಾಣಿಯಾದದ್ದೇನಂದರೆ-

॥ ಇಂದ್ರವಜ್ರಾ ॥

ಶಂಬೂಕನೆಂಬಾತನು ಶೂದ್ರನಿರ್ಪಂ ।
ತಾಂ ಭೂಮಿಯೊಳ್ ಕೇಳ್ ! ತಪಿಸುತ್ತೆ, ರಾಮಾ, ॥
ನೀಂ ಬೇಗದಿಂದಾತನ ಕೊಲ್ಲಲ್ಕೆ ! ಪ್ರಾ— ।
ಣಂ ಬರ್ಪುದೀ ಬ್ರಾಹ್ಮಣನರ್ಭಕಂಗೆ ॥ ೭ ॥

ಇದನ್ನು ಕೇಳಿ ಜಗತ್ಪತಿಯಾದ ಶ್ರೀರಾಮನು ಕೈಯಲ್ಲಿ ಖಡ್ಗವನ್ನು ತಾಳಿದವನಾಗಿ ಪುಷ್ಪಕವಿಮಾನವನ್ನೇರಿ, ಆ ಶೂದ್ರಮುನಿಯನ್ನು ಹುಡುಕಲಿಕ್ಕೆ ಎಲ್ಲಾದಿಕ್ಕುಗಳನ್ನೂ ಉಪದಿಕ್ಕುಗಳನ್ನೂ ಸಂಚರಿಸಲಿಕ್ಕೆ ಹೊರಟಿದ್ದಾನೆ.

ವಾಸಂತಿ— ಶಂಬೂಕನೆಂಬ ಶೂದ್ರನು ಧೂಮಪಾನವನ್ನು ಮಾಡುತ್ತಾ, ಇದೇ ವನದಲ್ಲಿ ತಪಿಸುತ್ತಾನೆ. ಈ ನಿಮಿತ್ತದಿಂದಾದರೂ ರಾಮಭದ್ರನು ಮತ್ತೊಮ್ಮೆ ಈ ವನವನ್ನು ತನ್ನ ಅಡಿದಾವರೆಗಳಿಂದ ಶೃಂಗರಿಸಲಿ! ಎಂದು ಅಪೇಕ್ಷಿಸುತ್ತೇನೆ.

ಆತ್ರೇಯಿ—ತಂಗೀ, ಇನ್ನು ನಾನು ಹೋಗಿಬರುತ್ತೇನೌವಾ, ಲೋಭ ವಿರಲಿ.

ವಾಸಂತಿ—ಒಳ್ಳೇದೌವಾ, ಮಧ್ಯಾಹ್ನವಾಯಿತು. ಬಿಸಿಲು ಬಹು ತೀಕ್ಷ್ಣವಾಗಿರುತ್ತದೆ; ಆದದರಿಂದ—

॥ ಮಾಲಿನಿ ॥

ಕರಿ ತುರಿಸಲು ತಿಕ್ಕಲ್ ಗಲ್ಲದಿಂ, ಕಾಪಿಸಲ್ಕೆ ।
ತರುಗಳು; ಬಿಸಿಲಿಂ ಬಾಡಿರ್ಪಗೊಂಚಲ್ಗಳಿಂದ ॥
ಸುರಿಯೆ ಸುಮಕುಲಂ ಗೋದಾವರೀ ಪೂಜೆಯನ್ನು ।
ವಿರಚಿಸುವವೊಲಕ್ಕು, ತೋರುಗುಂ ನೋಡು ಮತ್ತಂ ॥ ೮ ॥

ನೆಳಲಿಗೆ ಮರಗೋಡೊಳ್ ಕೂತು ಕೂಕ್ಕುತ್ತೆಕೊಕ್ಕಿಂ ।
ಹುಳುಗಳನರಿಸುತ್ತಂ ಪಕ್ಕಿಗಳ್ ವಿಶ್ರಮಿಕ್ಕುಂ ॥

ಬಳಲಿ ಝುಳಕೆ ಕೋಡೊಳ್ ಕೋಳಿಗಳ್ ಪಾರಿವಂಗಳ್ ।
ಕುಳಿತು ಬಿನದಿಕುಂ ತೀರಸ್ಥ ವೃಕ್ಷಂಗಳಲ್ಲಿ ॥ ೯ ॥

( ಹೀಗೆನ್ನುತ್ತಾ ಇಬ್ಬರೂ ಹೊರಟು ಹೋಗುತ್ತಾರೆ. )

( ಇದು ವಿಷ್ಕಂಭಕವು )

( ಬಳಿಕ ಖಡ್ಗಹಸ್ತನಾಗಿ ರಾಮನು ಬರುತ್ತಾನೆ. )

ರಾ—( ಕರುಣಾಮಯನಾಗಿ )

॥ ಮತ್ತೇಭ ॥

ಮಡಿದು ವಿಪ್ರನ ಬಾಲಕಂ ಬದುಕಲೀಗಳ್ ಸತ್ವರಂ ಖಡ್ಗವಂ ।
ಬಿಡೆಲೈ ದಕ್ಷಿಣಪಾಣಿ ಶೂದ್ರಮುನಿಯೊಳ್ ನಿನ್ನಲ್ಲಿ ಕಾರುಣ್ಯವೇ? ॥
ಗಡ ತಾಂ ತುಂಬಿದ ಗರ್ಭಭಾರಕೆ ಬಳಂಕುತ್ತಿರ್ಪವೈದೇಹಿಯಂ ।
ಮಿಡುಕಾ ಘೋರವನಾಂತಕಟ್ಟೆ ಕಳಿಪಾವಂತಂ ಗಾತ್ರವಾತಂಗೆ ನೀಂ ॥ ೧೦ ॥

(ಮಹಾ ಪ್ರಯಾಸದಿಂದ ಖಡ್ಗಪ್ರಹಾರವನ್ನು ಮಾಡಿ) ರಾಮನಿಗೆ ಯೋಗ್ಯವಾದ ಕೆಲಸವನ್ನು ರಾಮನು ಮಾಡಿಬಿಟ್ಟನು; ಇನ್ನಾದರೂ ಆ ಬ್ರಾಹ್ಮಣನ ಮಗನು ಬದುಕಲಿ !

(ಶಂಭೂಕನು ಮೊದಲಿನ ದೇಹವನ್ನು ಬಿಟ್ಟು ದಿವ್ಯದೇಹಧರನಾಗಿ ಬರುತ್ತಾನೆ)

ದಿವ್ಯಪುರುಷನು—ದೇವಾ, ಜಯ ಜಯ. ತಮ್ಮ ಚರಣಾನುಗ್ರಹದಿಂದ ಎರಡೂ ಕೆಲಸಗಳು ಸಿದ್ಧವಾದವು:—

॥ ವಸಂತತಿಲಕ ॥

ತಾಂ ಬಾಳಿತಾ ಶಿಶುವಭೀತಿಯನೀಯೆ ರಾಮಾ ।
ನೀಂ ಬಾದು ದುಡಿಸಲು ದಿವ್ಯಶರೀರನಾದೆಂ ॥
ಶಂಬೂಕನಾಂ ನಮಿಪೆನಂಘ್ರಿಗಳೊಳ್, ಪ್ರಭೋಸತ್ ।
ಸಂಬಂಧದಿಂ ಮರಣಮಾದೊಡಮುಂಟು ಸೌಖ್ಯಂ ॥ ೧೧ ॥

ರಾ—ನಮಗೆ ಎರಡೂ ಬೇಕಾದ ಕಾರ್ಯಗಳೇ, ಆದದ್ದರಿಂದ ಇನ್ನು ನೀನು ಹೋಗು. ಮತ್ತೂ 'ನಿನ್ನ ಘೋರವಾದ ತಪಸ್ಸಿನ ದಿವ್ಯಫಲವನ್ನು ಅನುಭವಿಸಪ್ಪಾ!

॥ ಆರ್ಯಾವೃತ್ತಂ ॥

ನೀನಲ್ಲಿರು ತೇಜಃಪು- ।
ಞ್ಞಾನಂದಾಮೋದಸಂಪದಾದಿಗಳ ॥
ಸ್ಥಾನದಿ ಶಾಶ್ವತಲೋಕದಿ ।
ಮಾನದೆ ವೈರಾಜನಾಮದೊಳ್ ಸತತಂ ॥ ೧೨ ॥

ಶಂಬೂಕ—ಇದು ಪ್ರಭುಗಳ ಚರಣಾನುಗ್ರಹದ ಮಹಿಮೆಯೇ ಹೊರ್ತು, ತಪಸ್ಸಿನಿಂದೇನಾದೀತು? ಒಂದುವೇಳೆ ತಪಸ್ಸೇ ದೊಡ್ಡ ಉಪಕಾರವನ್ನು ಮಾಡಿತೆಂದರೂ ಚಿಂತೆಯಿಲ್ಲ.

॥ ಮಂದಾಕ್ರಾಂತಾವೃತ್ತಂ ॥

ನಿನ್ನಂ ತ್ರೈಲೋಕ್ಯದೊಳರಸುವರ್ ಸುಜ್ಞರಿಷ್ಟಾರ್ಥಕಾಂತಿ ।
ರ್ದೇನ್ನಂ ನೂರ್ಗಾವುದವುರಿಘುತಾ ಕೂಪ್ರನನ್ವೇವನಕ್ಕೆ ॥
ಬನ್ನಂಬಟ್ಟೈದಿದುದಿದು ತಪೋಭಾಗ್ಯಮಲ್ಲೇದೊಡುತ್ತೈ ।
ಸನ್ನುತ್ಯಾಯೋಧ್ಯೆಯನುಳಿದು ನಿಮ್ಮಾಗಮಂ ದಾಡಕಕ್ಕೆ ॥ ೧೩ ॥

ರಾ—ಇದೇ ದಂಡಕಾರಣ್ಯವೇನು? ಹಾ, ಸ್ಮರಣೆಗೆ ಬಂತು,

॥ ಶಾರ್ದೂಲವಿಕ್ರೀಡಿತಂ ॥

ನೀಲಸ್ನಿಗ್ಧಕುಜಂಗಳೊಂದೆಡೆಗದೇಂ ಪಾಳ್ ಭೀಕರಂ ಕರ್ಕಶಂ ।
ಬೈಲಲ್ಲಲ್ಲಿಗೆ ಧಬ್ ಧಬಂಬರಿವಹಳ್ಳಂ ಕೊಳ್ಳಗಳ್ ಸಪ್ಪಳಂ ।
ಶೈಲಂಗಳ್ ಪೊಳೆಪುತ್ತುಗಳ್ ವಿಷಮಮಾರ್ಗಂ ಪುಣ್ಯತೀರ್ಥಾಶ್ರಮ
ಕ್ಕಾಲಂಬಂಗಳು ದಂಡಕಾವನದ ಭೂಭಾಗಂ... ತೋರ್ಪವು ॥ ೧೪ ॥

ಶಂಬೂಕ—ಇದೇ ದಂಡಕಾರಣ್ಯವು ಹಿಂದಕ್ಕೆ ತಾವು ಇಲ್ಲಿರುವಾಗ--

॥ ಆರ್ಯಾವೃತ್ತಂ ॥

ಖರದೂಷಣ ತ್ರಿಶಿರಮು ।
ಖ್ಯರಾ ಚತುರ್ದಶ ಸಹಸ್ರರಕ್ಕಸರು ॥
ತರಿಯಲ್ಪಟ್ಟರತಿಭಯಂ ।
ಕರ ಕೃತ್ಯರ್ ಸಮರದಲ್ಲಿ ಕರ್ಕಶರು ॥ ೧೫ ॥

ಅದರಿಂದ ಸಿದ್ಧಕ್ಷೇತ್ರವೆನಿಸಿದ ಈ ಜನಸ್ಥಾನವು ನಮ್ಮಂಥ ಪುಕ್ಕಜನರಾದರೂ ನಿರ್ಭೀತಿಯಿಂದ ಸಂಚಾರಮಾಡಲಿಕ್ಕೆ ಯೋಗ್ಯವಾಗಿರುತ್ತದೆ.

ರಾ—ಹಾಗಾದರೆ ಇದು ಕೇವಲ ದಂಡಕಾವನವೇ ಅಲ್ಲ, ಜನಸ್ಥಾನವೂ ಹೌದೇನು?

ಶಂಬೂ—ಹೌದು, ದೊರೆಗಳೇ ಸತ್ಯವು; ಇಗೋ ನೋಡಿರಿ! ಈ ದಕ್ಷಿಣ ದಿಕ್ಕಿಗೆ ಕಾಣುವ ದೀರ್ಘಾರಣ್ಯಗಳು ಜನಸ್ಥಾನದ ಗಡಿಯೊಳಗಿನವೇ. ಅಲ್ಲಿಯ ಬೆಟ್ಟದ ಗವಿಗಳಲ್ಲಿ ವಾಸಮಾಡಿಕೊಂಡಿರುವ ಉನ್ಮತ್ತ ಭಯಂಕರ ಶ್ವಾಪದಗಳ ಕಡೆಗೆ ಹಣಿಕಿ ನೋಡಿದರೆ ಎಲ್ಲ ಪ್ರಾಣಿಗಳ ಮೈಮೇಲೆ ಮುಳ್ಳುಗಳು ಬರುತ್ತವೆ. ಹಾಗುಃ—

॥ ಶಾರ್ದೂಲವಿಕ್ರೀಡಿತಂ ॥

ಕ್ರೂರಶ್ವಾಪದಘೋರಘೋಷಮಿಹುದತ್ತಂ ಶಬ್ದಪಿಲ್ಲಿತ್ತ, ಗಂ ।
ಭೀರಾಕಾರದಸುಪ್ತಭೋಗಿಯು ಸುರಿಂಕಾಳ್ಕಿಚ್ಚದುದ್ದೀಪಿಕಂ ॥
ಶೋರುತ್ತಿರ್ಪವು ಸೀಮೆಗಳ್, ಸಲಿಲವಲ್ಪಂ ಹಳ್ಳಕೊಳ್ಳಂಗಳೊಳ್ ।
ಪೀರುತ್ತಂ ಸರಟಂಗಳೊಲ್ದಜಗರಸ್ವೇದಾಂಬುವಂ ಬಾಳ್ವವು ॥ ೧೬ ॥

ರಾ— ಸರಿ ಸರಿ! ಇದೇ ಜನಸ್ಥಾನವು:—

॥ ಭುಜಂಗ ಪ್ರಯಾತಂ ॥

ಜನಸ್ಥಾನವಂ ನೋಡೆ, ಹಿಂದಾದ ವೃತ್ತಂ ।
ಮನಸ್ಸಿಂಗೆ ಕಣ್ಣಿಂಗೆ ಕಟ್ಟಿರ್ಪುದೀಗಳ್ ॥
ಅನೇಕಾಸುರವ್ಯೂಹವಂ ಕೂಡಿಕೊಂಡಾ ।
ದನೂದೂ ತನಂದಿರ್ದನಿಲ್ಲೇ ಖರಾಖ್ಯಂ ॥ ೧೭ ॥

( ಸೂಕ್ಷ್ಮವಾಗಿ ನೋಡಿ ) ನಮ್ಮ ಸೀತೆಗೆ ವನವಿಹಾರದಲ್ಲಿ ಬಹಳ ಉಲ್ಲಾಸವಿದ್ದದರಿಂದ ಅವಳ ಕೂಡ ನಾನು ಇರುವಾಗ ಈ ವನಗಳು ಬಹು ಸೊಗಸಾಗಿದ್ದವು. ಅವೇ ಈಗ ಎಷ್ಟು ಭಯಂಕರವಾಗಿವೆ? ( ಬಾಷ್ಪಲೋಚನನಾಗಿ )

ಮನಃಪ್ರೀತೆ! ಹಾ ಸೀತೆ! ನಾಂ ನಿಮ್ಮ ಕೂಡೆ ।
ವನಕ್ಕೈತಹೆಂ ಪುಷ್ಪಮೋದಾಶ್ರಯಕ್ಕೆ ॥
ಎನುತ್ತಂದು ಸಂತೋಷಿಸುತ್ತಿರ್ದೆ! ನಿನ್ನಾ ।
ಘನಪ್ರೇಮವಾತ್ಸಲ್ಯಕಿನ್ನುಂಟೆ ಸಾಮ್ಯಂ ? ॥ ೧೮ ॥

॥ ಆರ್ಯಾವೃತ್ತಂ ॥

ಏನಂ ಮಾಡದಲೇ ಪ್ರಿಯು ।
ರಾನಂದವ ಬೀರಿ ಮಾಣಿಸವ್ಯಥೆಯಂ ॥

ಏನೋ ವಿಲಕ್ಷಣ ಧನಂ ।
ತಾನೆನಿಸಿರ್ಪರಲ್ಲಭರ್ಗೆ ವಲ್ಲಭರು ॥ ೧೯ ॥

ಶಂಬೂ— ಇನ್ನು ಈ ಘೋರಾರಣ್ಯಗಳಿರಲಿ! ಶಾಂತಗಂಭೀರವಾದ ಮಧ್ಯಪ್ರದೇಶದ ಅಡವಿಗಳನ್ನು ಮಹಾನುಭಾವರು ನೋಡಬೇಕು. ಅಲ್ಲಿ ಸೊಕ್ಕಿದ ನವಿಲುಗಳ ಕಂಠದ ಕಾಂತಿಯುಳ್ಳ ನೀಲವರ್ಣವುಳ್ಳ ಗುಡ್ಡಗಳಿವೆ. ಆ ಗುಡ್ಡಗಳ ಮೇಲೆ ಕಪ್ಪಾದ ನೆಳಲುಳ್ಳ ತರುಣವೃಕ್ಷಗಳ ದಟ್ಟವಾದ ಕೊಪ್ಪಲುಗಳು ಒಪ್ಪುತ್ತವೆ. ಅವುಗಳ ಮಧ್ಯದಲ್ಲಿ ನಾನಾವಿಧದ ಚಿಗರೀಹಿಂಡುಗಳು ಅಂಜಿಕೆ ಇಲ್ಲದೆ ತಿರುಗಾಡುತ್ತವೆ. ಹಾಗು—

॥ ವಸಂತತಿಲಕಂ ॥

ತೀರಂಗಳಲ್ಲಿರುವ ವೇತಸವಲ್ಲಿಯಲ್ಲಿ ।
ಸೇರಿರ್ಪ ಪಕ್ಷಿತತಿ ಕುಕ್ಕಿ ಸುಮಂಗಳೊಕ್ಕು ॥
ಸೌರಭ್ಯಶೀತಮಧುರಾಮಲಮಾದನೀರಿಂ ॥
ನೀರಾಜಿಸುತ್ತೆ ನದಿಗಳ್ ಪರಿತರ್ಪವಿಲ್ಲಿ ॥ ೨೦ ॥

॥ ವಸಂತತಿಲಕಂ ॥

ತುಂಬಿರ್ಪಪಣ್ಗಳುರೆ ಕಪ್ಪಿಡಿದೊಪ್ಪುತಿರ್ಪ ।
ಜಂಬೂನಿಕುಂಜದೊಳಗಿಂದೆ ನದೀಪ್ರವಾಹಂ ॥
ತಾಂಬರ್ಪಕಾಲಕಟಿಯುತ್ತತಿವೇಗದಿಂದೆ ।
ತ್ತಂಭೋರೆನುತ್ತೆ ಕಿವಿದುಂಬಿದೆ ಘೋರಘೋಷಂ ॥ ೨೧ ॥

॥ ಮಾಲಿನೀವೃತ್ತಂ ॥

ಗಿರಿಯ ಗರುಡಿಯೋಳ್ ತಾರುಣ್ಯದಿಂ ಸೊಕ್ಕಿದಂಥ ।
ಕರಡಿಗುರುಕಿಸಲ್ ಕೇಳ್ದು ಪ್ರತಿಧ್ವಾನಮೆತ್ತಂ ॥
ಕರಿ ಮುರಿಯಲು ಸೋರಲ್ ಸಲ್ಲಕೀಶಾಖೆಯಿಂಪಾಲ್ ।
ತುರುಗಿದೆ ಕಟುಗಂಧಂ ಕ್ಷಿತ್ಯಸೌರಭ್ಯಯುಕ್ತಂ ॥ ೨೨ ॥

ರಾ—( ಕಣ್ಣೀರುಗಳನ್ನು ಒತ್ತಿಕೊಂಡು ) ಎಲೈ! ನಿನಗೆ ಮಾರ್ಗದಲ್ಲಿ ಶುಭವಾಗಲಿ! ಪುಣ್ಯಲೋಕಕ್ಕೆ ಹೋಗುವದಕ್ಕಾಗಿ ವಿಮಾನವನ್ನೇರುವವನಾಗು.

ಶಂಬೂ—ಪ್ರಸಾದ ಸ್ವಾಮಿ! ಇಲ್ಲೇ ಸಮೀಪದಲ್ಲಿರುವಂಥ, ಅನಾದಿ ಬ್ರಹ್ಮವಾದಿಯಾದಂಥ ಅಗಸ್ತ್ಯ ಮಹಾಮುನಿಗೆ ನಮಸ್ಕರಿಸಿ, ಶಾಶ್ವತಪದವಿಗೆ ಹೋಗುತ್ತೇನೆ. ( ಹೀಗೆಂದು ಹೊರಟು ಹೋಗುತ್ತಾನೆ. )

ರಾ—( ಮನಸಿನಲ್ಲೇ ಮಾತಾಡುತ್ತಾನೆ. )

॥ ವಸಂತತಿಲಕಂ ॥

ಇಂದೀವನಂ ಮಗುಳೆ ಕಂಡಪುದಿರ್ದೆವಿಲ್ಲಿ ।
ಹಿಂದಕ್ಕೆ ವನ್ಯರುಗಳಾಗಿ ಗೃಹಸ್ಥರಾಗಿ ॥
ಬಂದಾಪ್ರಪಂಚಸುಖದಲ್ಲಿ ರಸಜ್ಞರಾಗಿ ।
ಸಂದುಂಸ್ವಧರ್ಮದಿ ಚತುರ್ದಶವತ್ಸರಂಗಳ್ ॥ ೨೩ ॥

ಶೈಲಂಗಳಾಗಿನವಿವೇ ಸುವನಸ್ಥಳಂಗಳ್ ।
ನೌಲಿಲ್ಲಿ ಕೂಗುತಿವೆ ಪುಲ್ಲೆಗಳಾಡುತಿರ್ಕುಂ ॥
ಮೇಲಾದಶೋಕತರು, ವೇತಸವಲ್ಲಿಗಳ್ ಸಾಲ್ ।
ಸಾಲಾಗೆ ಕಪ್ಪುನೆಳಲುಳ್ಳ ನದೀತಟಂಗಳ್ ॥ ೨೪ ॥

ಮತ್ತು—

॥ ಉಪೇಂದ್ರವಜ್ರಾ. ॥

ಇದದ್ರಿಯಾಪ್ರಸ್ರವಣಂ ಸಮೀಪ ।
ಪ್ರದೇಶದಲ್ಲಿರ್ದೊಡಮಕ್ಷಿಗಳ್ಗೆ ॥
ಸದಭ್ರಮಾಲೋಪಮಮಾಯ್ತು, ಗೋದಾ ।
ನದೀಪ್ರವಾಹಂ ಪರಿತರ್ಪದಲ್ಲಿಂ ॥ ೨೫ ॥

॥ ಶಾರ್ದೂಲವಿಕ್ರೀಡಿತಂ ॥

ಆ ಗೃಧ್ರೇಂದ್ರಜಟಾಯುವೀ ಗಿರಿಮಹಾಶೃಂಗಾಗ್ರದಲ್ಲಿರ್ದನೈ ।
ಆಗಾಪರ್ಣಕುಟೀರದಲ್ಲಿದರಧೋ ಭಾಗಕ್ಕೆ ನಾವಿರ್ದೆವು ॥
ಆ ಗೋದಾವರಿಯಲ್ಲಿ ಬಾಗಿರುವ ನೀಲಕ್ಷ್ಮಾಜ್ಮದತ್ಯಂತಶೋ ।
ಭಾಗಾರಂ ಖಗಮಂಜುಗಾನಮುಖರಂ ಮತ್ತಲ್ಲಿ ರಮ್ಯಂ ವನಂ ॥ ೨೬ ॥

ಆದದರಿಂದ ಆ ಪಂಚವಟೀಸ್ಥಾನವು ಇಲ್ಲೇ ಇರಬಹುದು; ಹಿಂದಕ್ಕೆ ಇಲ್ಲಿ ನಾವು ಬಹುಕಾಲ ವಾಸಮಾಡಿದ್ದರಿಂದ ನಮ್ಮ ಗುರುತಿನ ಈ ಪ್ರದೇಶಗಳು ಪೂರ್ವಪ್ರಸಂಗಗಳನ್ನು ನೆನಪು ಮಾಡುತ್ತವೆ, ನನ್ನ ಪ್ರಾಣವಲ್ಲಭೆಯ ಜೀವದ ಗೆಳತಿಯಾದ ವಾಸಂತಿಯೆಂಬ ವನದೇವಿಯು ಇಲ್ಲೇ ಇರಬಹುದು; ಅಯ್ಯೋ! ರಾಮನಿಗೆ ಈಗ ಇದೆಲ್ಲ ಸಂಕಟವು ಎಲ್ಲಿಂದ ಗಂಟುಬಿತ್ತು ? ಇದರಿಂದ—

॥ ಮತ್ತೇಭವಿಕ್ರೀಡಿತಂ ॥

ಚಿರಕಾಲಕ್ಕಡಗಿರ್ದ ನಂಜೊಡಲೊಳೊಮ್ಮೀದೊಮ್ಮೆ ತಾನೇರಿದಂ ।
ತಿರೆ ಬೇದೇದಿನಮುಳ್ ಸಿಡಿಲ್ದು ಭರದಿಂ ನಟ್ಟಿಂತಿರಿಲ್ಲಿಂದಲೋ ॥
ನೆರೆಗಂಟಿಕ್ಕಿದ ಹುಣ್‌ಚಿರಂ ಹೃದಯಮರ್ಮಸ್ಥಾನದೊಳ್ ಬಿಚ್ಚಿದಂ ।
ತಿರೆ ಮತ್ತಂ ಮಿಗಿಲಾಗಿನೋಯಿಸುವನ್ನಂ ಬೀಳಿಕುಂ ಶೋಕವು ॥ ೨೭ ॥

ಆದರೂ ನಮ್ಮ ಮೊದಲಿನ ಗೆಳೆಯರಂತಿರುವ ಈ ಭೂಭಾಗಗಳನ್ನು ಇನ್ನೊಮ್ಮೆ ನೋಡೋಣ; ಓಹೋ ಈ ವನಸ್ಥಳಗಳ ರಚನೆಯು ಬಹುಕಾಲವಾದದರಿಂದ ವಿಪರೀತವಾಗಿ ಹೋಗಿದೆ:—

॥ ಮತ್ತೇಭವಿಕ್ರೀಡಿತಂ ॥

ಮೊದಲೆಲ್ಲಿತ್ತು ನದೀಪ್ರವಾಹವಿಹುದೀಗಾತಾಣದೊಳ್ಪಾಲುಕಂ, ।
ಮೊದಲಿರ್ದಲ್ಲಿಮರಂಗಳೀಗಬಯಲ್ಗೆ ವೃಕ್ಷಾನ್ವಿತಂ ಮುಂಬಯಲ್, ॥
ಇದನೋಡಲ್ ಬಹುಕಾಲದಿಂ ಪೊಸತಿದೇನೇದೇಬೆನ್ನೆ ಕಾನನಂ ।
ಮೊದಲಾವಿರ್ದುದಿದೆಂದು ಸೂಚಿಸುವವೀ ಶೈಲಸ್ವರೂಪಂಗಳು ॥ ೨೮ ॥

ಅಹಹ! ಇಲ್ಲಿಂದ ಬೇಗನೇ ಹೊರಟುಹೋಗನಿಶ್ಚಯಿಸುವ ನನ್ನನ್ನು ಪಂಚವಟೀವಾತ್ಸಲ್ಯವು ಬಲಾತ್ಕಾರದಿಂದ ಹಿಂದೆಳೆಯುತ್ತದಲ್ಲಾ ? ಏನು ಮಾಡಲಿ? ಹಾ! ಎಂದು ( ಕರುಣಾಮಯನಾಗಿ )

॥ ಶಾರ್ದೂಲವಿಕ್ರೀಡಿತಂ ॥

ಯಾವಲ್ಲೀ ಪ್ರಿಯೆಗೂಡಿ ಮಂದಿರದೊಳಿರ್ದಂತಿರ್ದನಾನಂದದಿಂ ।
ದಾವೀಸ್ಥಾನದೊಳಾದವಿಸ್ತೃತ ಕಥಾಲಾಪಂಗಳಂ ಪ್ರೀತಿಪಂ ॥
ಈವೊತ್ತೀರ್ವನೆ ರಾಮನೆಂತು ಗತಭಾರ್ಯಂ ಪೋಪನಲ್ಲಿನ್ನುದು ।
ರ್ದೈವಂ ಪಂಚವಟೀವನಂಬೊಗದೊಡೆಂತಪ್ಪಂ? ಕೃತಘ್ನಂ ಶಠಂ ॥ ೨೯ ॥

( ಇಷ್ಟರಲ್ಲಿ ಶಂಬೂಕನು ತಿರುಗಿ ಬರುತ್ತಾನೆ. )

ಶಂಬೂ—ಶ್ರೀರಾಮಚಂದ್ರಾ, ನಿನಗೆ ಜಯವಿರಲಿ. ದೇವಾ, ಅಗಸ್ತ್ಯರು ನನ್ನ ಮುಖದಿಂದ ತಾವು ಇಲ್ಲಿ ಬಂದಿರುವದನ್ನು ಕೇಳಿ, ಪುನಃ ನನ್ನನ್ನು ತಮ ಬಳಿಗೆ ಹೀಗೆ ಹೇಳಿಕಳುಹಿದ್ದಾರೆ:—" ನಮಗೆ ಒಮ್ಮೆ ದರ್ಶನವನ್ನು ಕೊಟ್ಟು ಹೋಗಬೇಕು. ತಾವು ವಿಮಾನದಿಂದ ಇಲ್ಲಿ ಇಳಿದಕೂಡಲೇ ತಮಗೆ ಮಾಡತಕ್ಕ ಮಂಗಳಾರತಿಯ ಸಾಹಿತ್ಯವನ್ನು ಇಟ್ಟುಕೊಂಡು, ನಿಮ್ಮ ಮೇಲೆ ಅಕ್ಕರ

ವುಳ್ಳ ಲೋಪಾಮುದ್ರೆಯು ಸಿದ್ಧಳಾಗಿ ದಾರೀನೋಡುತ್ತ ಕೂತಿದ್ದಾಳೆ; ಮಹರ್ಷಿಗಳೆಲ್ಲರೂ ತಮ್ಮ ಸಂದರ್ಶನಕ್ಕೆ ಆತುರರಾಗಿದ್ದಾರೆ; ಇಲ್ಲಿಗೆ ಬಂದ ಕೂಡಲೇ ಬೇಗನೇ ಅಪ್ಪಣೆಯನ್ನು ಕೊಡುತ್ತೇವೆ; ತಮ್ಮ ಪುಷ್ಪಕವಿಮಾನವಾದರೂ ಬಹಳ ವೇಗವುಳ್ಳದ್ದಾದಕಾರಣ ನಮಗೆ ಬೆಟ್ಟಿಯನ್ನು ಕೊಟ್ಟು, ವಿಮಾನದಲ್ಲಿ ಕೂತು ಸ್ವದೇಶಕ್ಕೆ ಹೊರಟರೂ, ಅಶ್ವಮೇಧಯಜ್ಞದ ನಿಯಮಿತ ಕಾಲಕ್ಕೆ ಹೋಗಿ ಮುಟ್ಟುವಿರಿ."

ರಾ—ಒಳ್ಳೇದು ಹಾಗೇ ಆಗಲಿ. ಮಹಾನುಭಾವರಾದ ಅಗಸ್ತ್ಯರ ಅಪ್ಪಣೆಯಂತೆ ಅಗತ್ಯವಾಗಿ ನಡೆಯುತ್ತೇನೆ.

ಶಂಬೂ—ಹಾಗಾದರೆ, ದೊರೆಗಳು ಇತ್ತಕಡಿಗೆ ವಿಮಾನವನ್ನು ನಡಿಸಬೇಕು.

ರಾ—ಎಲೈ ಭಗವತಿ ಪಂಚವಟೀ, ಗುರುಜನರ ಅಪ್ಪಣೆಯನ್ನು ಮೀರಲಿಕ್ಕಾಗುವದಿಲ್ಲ; ಅದರಿಂದ ರಾಮನು ನಿನ್ನನ್ನು ಅಗಲಿ ಅತ್ತಕಡಿಗೆ ಹೋಗುತ್ತಾನೆ; ಒಂದುಗಳಿಗೆ ಮಾತ್ರ ಇದನ್ನು ತಾಳು ಕಂಡಿಯಾ !

ಶಂಬೂ—ದೊರೆಯೇ ಈ ವನದಲ್ಲಿರುವ ಚಮತ್ಕಾರವನ್ನು ನೋಡು:—

|| ಶಾರ್ದೂಲವಿಕ್ರೀಡಿತಂ ||

ಆ ಕುಂಜಾಂತದಿ ಗೂಗೆ ಘೂತ್ಕರಿಸೆ ವಾತಕ್ಕುಹ್ಮ ವೇಣುಸ್ವರಂ ।
ಮೂಕಂ ಕೊತ್ತಳಿ ಇಲ್ಲಿ ಬೆಚ್ಚಿಹುದಿದಾಕ್ರೌಂಚಾವತಂ ಪರ್ವತಂ ॥
ಬೇಕಾದಂತುಲಿದಾಡುತಿರ್ಪನವಿಲುದ್ಘೋಷಕ್ಕೆ ಪಾವಂಜುತಂ ।
ಸಾಕೆಂದೇರ್ವವಡಂಗಲಾವಲಯುಜ ಪ್ರಾಚೀನ ವೃಕ್ಷಾಗ್ರವಂ ॥ ೩೦ ॥

|| ಮತ್ತೇಭವಿಕ್ರೀಡಿತಂ ||

ಮುಗಿಲಂ ಮುಟ್ಟುವ ನೀಲಸಾನುಗಳಿವಾ ಬೆಟ್ಟಂಗಳೀ ತೆಂಕಲೊಳ್ ।
ಸುಗುಹಾಗರ್ಭಗಧಬ್ಧಭಂ ! ಬರಿವವಾಗೋದಾಪ್ರವಾಹಂಗಳು ॥
ಮಿಗಿಲಾವೇಗದಿನೊಂದನೊಂದಟೆಯೆ ನೀರ್, ಕಲ್ಲೋಲ ಕೋಲಾಹಲಂ ।
ನೆಗಳಲ್ ಸಿಂಧುಗಳಿಲ್ಲಿ ಕೂಡಿಹವಿಗೋ ಗಂಭೀರಪುಣ್ಯಾಂಬುಗಳ್ ॥ ೩೧ ॥

( ಹೀಗೆ ಎಲ್ಲರೂ ಹೊರಟು ಹೋಗುತ್ತಾರೆ. )

( ಉತ್ತರ ರಾಮಚರಿತ್ರದಲ್ಲಿ ಪಂಚವಟೀಪ್ರವೇಶವೆಂಬ ಎರಡನೇ ಅಂಕವು ಮುಗಿಯಿತು. )

---

# ಉತ್ತರರಾಮಚರಿತ್ರ ನಾಟಕವು.

## ೩ನೇ ಅಂಕವು.



( ಆ ಬಳಿಕ ತಮಸೆ ಮತ್ತು ಮುರಲೆ ಎಂಬ ಎರಡು ನದಿಗಳು ಸ್ತ್ರೀರೂಪದಿಂದ ಬರುತ್ತವೆ. )

ತಮಸೆ —ಸಖೀ ಮುರಲೇ, ನೀನು ಬಹುಸಂಭ್ರಮದಿಂದ ಎಲ್ಲಿಗೆ ನಡೆದಿ!

ಮುರಲೆ—ಭಗವತೀ ತಮಸೇ ಕೇಳು. ಅಗಸ್ತ್ಯಪತ್ನಿಯಾದ ಲೋಪಾಮುದ್ರಾದೇವಿಯು ಅಪ್ಪಣೆಯ ಪ್ರಕಾರ ನದೀಮುಖ್ಯಳಾದ ಶ್ರೀಗೋದಾವರಿಗೆ ನಿರೂಪವನ್ನು ಹೇಳಲಿಕ್ಕೆ ಹೋಗುತ್ತೇನೆ. ಆಕೆ ಹೇಳಿದ್ದೇನಂದರೆ:— "ಔವಾ ಮುರಲೇ, ಗೋದಾವರಿಗೆ ನೀನು ಹೇಳತಕ್ಕದ್ದೇನಂದರೆ—ಸೀತೆಯನ್ನು ಬಿಟ್ಟಂದಿನಿಂದ ರಾಮುಭದ್ರನ ಅವಸ್ಥೆಯು ಹ್ಯಾಗಾಗಿರುತ್ತದೆ ಎಂಬದನ್ನು ನೀನು ತಿಳಿದವಳಾಗಿರುತ್ತೀಯಷ್ಟೆ !

॥ ವಸಂತತಿಲಕ ॥

ಗಂಭೀರನಾಗಿಹುದರಿಂ ಪ್ರಭುರಾಮನಲ್ಲಿ ।<br>
ತುಂಬಿರ್ದು ಕಂಗೊಳಿಸುತಿರ್ಪ ವಿಯೋಗದುಃಖ ॥<br>
ಸಂಬಂಧಿಯಾದ ಕರುಣಾರಸವಾಗಲಿರ್ಕುಂ ।<br>
ತಾಂ ಬೇಯುತಿರ್ಪ ಪುಟಪಾಕದಹಾಗೆ ಕೇಳೌ ॥ ೧ ॥

ಆದದ್ದರಿಂದ ಅಂಥಾ ತನ್ನ ಪ್ರಿಯಪತ್ನಿಗೆ ಕಷ್ಟ ಒದಗಿದ್ದನ್ನು ನೆನಿಸಿ, ಮತ್ತೂ ಹೆಚ್ಚಾಗಿ ಬೆಳೆಯುತ್ತಲೇ ಇರುವ ಶೋಕಸಂತಾಪಗಳಿಂದ ಈ ಕಾಲದಲ್ಲಿ ರಾಮಭದ್ರನು ಬಹಳ ಸೊರಗಿದ್ದಾನೆ. ಆತನನ್ನು ನೋಡಿ ನನ್ನ ಎದೆಯು ಒಡೆಯಿತು. ಮತ್ತು ಈಗ ತಿರುಗಿ ತನ್ನ ಸ್ಥಳಕ್ಕೆ ಹೋಗುವಾಗ ರಾಮಚಂದ್ರನು ಪಂಚವಟೀಪ್ರದೇಶದೊಳಗಿಂದೇ ಹೋದಾನು. ಅಲ್ಲಿ ಬಹುಕಾಲದವರೆಗೆ ಹೆಂಡತಿಯೊಡನೆ ವಾಸಮಾಡಿದ ಪ್ರದೇಶಗಳು ಆತನ ಕಣ್ಣಿಗೆಬಿದ್ದಾವು. ಸ್ವಭಾವದಿಂದ ರಾಮನು ಧೀರನಾದಾಗ್ಯೂ ಇಂಥಾ ಅವಸ್ಥೆಯಿಂದ ಆ ಸ್ಥಳಗಳಲ್ಲಿದ್ದಾಗ ಅತ್ಯಂತಶೋಕದ ವೇಗದಿಂದ ಮೇಲಿಂದಮೇಲೆ ಎದೆಯೊಡೆದು, ಮಹಾಪ್ರಮಾದಗಳು ಆತನಿಗೆ ಉಂಟಾದಾವೆಂದು ತೋರುತ್ತದೆ. ಆದರೆ— ಎಲೈ ದೇವಿ ಗೋದಾವರಿ, ಅಂಥಾ ಸಮಯಗಳಲ್ಲಿ ನೀನು ರಾಮಭದ್ರನ ಜೀವವನ್ನು ಕಾಪಾಡುವಲ್ಲಿ ಜಾಗ್ರತಳಾಗಿರಬೇಕು ಕಂಡಿಯಾ !

**ಅಂತಪ್ಪಗಂಧವ ತರಂಗಗಳನ್ನು ದಾಂಟಿ ।**
**ತುಂತುರ್ಗಳಂ ತಳೆದು ಬರ್ಪೆಲರಿಂದೆ ಬೀಸಿ ॥**
**ಇಂತೊಯ್ಯನೊಯ್ಯನೆ ಶ್ರಮಂಗಳಿ ರಾಮಭದ್ರಂ ।**
**ಸಂತಾಪದಿಂದಿರೆ ಸುಖಂಗೊಡು ದೇವಿ ನೀನು ॥ ೨ ॥**

ತಮಸೆ—ಹೌದು! ವಾತ್ಸಲ್ಯವಿದ್ದರೆ ಹೀಗೆ ಇರಬೇಕು, ಇದು ತಕ್ಕದ್ದೇ ಸರಿ. ಆದರೆ ರಾಮಭದ್ರನಿಗೆ ಮೊದಲಿನಿಂದ ವಿಶ್ರಾಂತಿಗೊಡುವ ಪ್ರಸಿದ್ಧವಾದ ಉಪಾಯವು ತನಗೆ ತಾನೇ ಸಮೀಪದಲ್ಲಿ ಬಂದಿರುತ್ತದೆ.

ಮುರಲೆ—ಅದು ಹ್ಯಾಗೆ ?

ತಮಸೆ—ಕೇಳು, ಹಿಂದಕ್ಕೆ ಲಕ್ಷ್ಮಣನು ಸೀತಾದೇವಿಯನ್ನು ವಾಲ್ಮೀಕಿಯ ತಪೋವನದ ಬಳಿಯಲ್ಲಿ ಬಿಟ್ಟು ಹೋಗುತ್ತಿರಲು, ಆಕೆಗೆ ಪ್ರಸವವೇದನೆಯು ಉಂಟಾದದರಿಂದ ಅತಿದುಃಖದ ಭರವನ್ನು ತಾಳಲಾರದೆ ಗಂಗಾಪ್ರವಾಹದಲ್ಲಿ ಬಿದ್ದಳು. ಬಳಿಕ ಆಗಲೇ ಅಲ್ಲಿ ಅವಳಿಮಕ್ಕಳನ್ನು ಹಡೆದಳು; ಆ ಕಾಲಕ್ಕೆ ಅತಿಕರುಣಾಳುಗಳಾದ ಪೃಥ್ವೀಗಂಗಾದೇವಿಯರಿಬ್ಬರು ಅಭಯವನ್ನು ಕೊಟ್ಟು, ಆಕೆಯನ್ನು ರಸಾತಲಕ್ಕೆ ಕರೆದೊಯ್ದು ಕಾಪಾಡಿದರು. ಸ್ತನಪಾನವನ್ನು ಬಿಟ್ಟಬಳಿಕ ಸೀತಾಪುತ್ರರನ್ನು ಗಂಗಾದೇವಿಯು ತಾನೇ ಕರಕೊಂಡು ಬಂದು ವಾಲ್ಮೀಕಿಮಹರ್ಷಿಗಳಿಗೆ ಸಮರ್ಪಿಸಿ ಹೋಗಿರುತ್ತಾಳೆ.

ಮುರಲೆ—ಅಹಹ! ಏನು ವಿಚಿತ್ರವಿದು ?

॥ ವಸಂತತಿಲಕಂ ॥

**ಇಂತೀ ಮಹಾತ್ಮರುಪಕಾರವ ಮಾಡಲಿಕ್ಕೆ ।**
**ಸೀತಲ್ಲಿಯುಂ ತ್ರಿಭುವನಾಂಬಿಕೆಯಲ್ಲಿಯುಂ ಮೇಣ್ ॥**
**ಇಂಥಾ ಮಹಾದ್ಭುತದಶಾಪರಿಣಾಮವಾಯ್ತಿಂ ।**
**ನೆಂತೋ ನರಾಧಮರ ಬಾಳ್ಗೆ ಫಲಾಫಲಂಗಳ್ ॥ ೩ ॥**

ತಮಸೆ—ಮತ್ತು ಈ ಕಾಲಕ್ಕೆ ಶಂಬೂಕನ ಸಂಹಾರಕ್ಕಾಗಿ ರಾಮರಾಜನು ಜನಸ್ಥಾನಕ್ಕೆ ಹೋಗಬಹುದೆಂಬ ಈ ಸುದ್ದಿಯನ್ನು ಶರಯೂಮುಖದಿಂದ ಕೇಳಿದವಳಾಗಿ ಭಾಗೀರಥೀದೇವಿಯು ಲೋಪಾಮುದ್ರೆಯಂತೆ ವಿಚಾರವುಳ್ಳವಳಾಗಿ ಜಾನಕಿಯೊಡನೆ ಮನೇ ಕೆಲಸದ ನೆವವನ್ನು ಮಾಡಿಕೊಂಡು ಗೋದಾವರಿಯನ್ನು ನೋಡಬಂದಿರುತ್ತಾಳೆ.

ಮುರಲೆ—ಗಂಗಾದೇವಿಯು ಬಹಳ ಒಳ್ಳೇ ಆಲೋಚನೆಯನ್ನು ಮಾಡಿದಳು. ಯಾಕಂದರೆ, ಶ್ರೀರಾಮನು ರಾಜಧಾನಿಯಲ್ಲಿದ್ದಾಗ ಆತನ ಮನಸ್ಸು ಲೋಕಕಲ್ಯಾಣದ ಬಹಳ ಕಾರ್ಯಗಳಲ್ಲಿ ತೊಡಗಿತ್ತು. ಆದರೆ ಈಗ ಅವನ ಚಿತ್ತಕ್ಕೆ ಮತ್ತೊಂದು ಹಂಬಲವೇ ಇಲ್ಲ, ವಿಯೋಗದುಃಖವೊಂದೇ ಸಂಗಡಿಸಿರುತ್ತದೆ. ಹೀಗಿದ್ದಮೇಲೆ ಈ ಪಂಚವಟೀಪ್ರವೇಶದಲ್ಲಿ ಆತನಿಗೆ ಮಹಾ ಅನರ್ಥಗಳು ಉಂಟಾಗುವ ಪ್ರಸಂಗವದೆ ಎಂದು ಸೀತಾದೇವಿಯನ್ನು ಕರತಂದದ್ದು ಒಳ್ಳೇದಾಯಿತು. ಆದರೆ ಜಾನಕಿಯಿಂದ ರಾಮಚಂದ್ರನಿಗೆ ಸಮಾಧಾನವನ್ನು ಹ್ಯಾಗೆ ಮಾಡಿಸುವಳೋ ತಿಳಿಯದು.

ತಮಸೆ—ಈವೊತ್ತು ಭಾಗೀರಥಿಯು ಸೀತೆಯನ್ನು ಕುರಿತು:-"ಮಗಳೇ ಜಾನಕೀ, ಇಂದು ನಿನ್ನ ಮಕ್ಕಳಾದ ಕುಶಲವರ ಆಯುಷ್ಯವೃದ್ಧ್ಯರ್ಥವಾಗಿ ಮಂಗಳಕಾರ್ಯವನ್ನು ಮಾಡಬೇಕು. ಆದದ್ದರಿಂದ ನಿಮ್ಮ ಆದಿಶ್ವಶುರನಾದಂಥ, ಮನುವಂಶೋತ್ಪಾದಕನಾದಂಥ, ನಿಷ್ಕಲಂಕನಾದಂಥ ಸೂರ್ಯನನ್ನು ನಿನ್ನ ಕೈಯಿಂದ ನೀನೇ ಹೂವುಗಳನ್ನು ತಂದು ಪ್ರಸನ್ನನಾಗುವಂತೆ ಪೂಜಿಸು, ಅಂಜಬೇಡ; ನೀನು ಭೂಮಿಭಾಗದಲ್ಲಿ ಸುಳಿದಾಡುತ್ತಿರಲು, ನನ್ನ ಮಹಿಮೆಯಿಂದ ವನದೇವತೆಗಳಾದರೂ ನಿನ್ನನ್ನು ನೋಡಲಿಕ್ಕೆ ಸಮರ್ಥರಾಗುವದಿಲ್ಲ. ಇನ್ನು ಮನುಷ್ಯರಂತೂ ಇರಲಿ!" ಎಂದು ಹೇಳಿದ್ದಾಳೆ. ಮತ್ತು ನನಗೂ—ಎಲೈ ತಂಗಿ ತಮಸೇ, ಜಾನಕಿಯ ಪ್ರೇಮವು ನಿನ್ನಲ್ಲಿ ಬಹಳವಾಗಿರುತ್ತದೆ, ಆದರಿಂದ ನೀನೇ ಇವಳ ಸಮೀಪದಲ್ಲಿದ್ದು ಈಕೆಯನ್ನು ಕಾಪಾಡಕಂಡಿಯಾ? ಎಂದು ಅಪ್ಪಣೆ ಮಾಡಿದಳು. ಆದುದರಿಂದ ನನಗೆ ಹಾಗೆ ಮಾಡುವದು ಅವಶ್ಯವದೆ.

ಮುರಲೆ—ಹೀಗಿದ್ದರೆ ಇನ್ನು ನಾನು ಗೋದಾವರಿಯ ಕಡೆಗೆ ಹೋಗುವ ಕೆಲಸವಿಲ್ಲ. ಈ ಸುದ್ದಿಯನ್ನು ಲೋಪಾಮುದ್ರಾದೇವಿಗೆ ತಿಳಿಸುತ್ತೇನೆ. ರಾಮಚಂದ್ರನಾದರೂ ಗೋದಾವರೀತೀರಕ್ಕೆ ಬಂದಿರಬಹುದೆಂದು ತೋರುತ್ತದೆ.

ತಮಸೆ—ಅಗೋ ನೋಡು, ಜಾನಕಿಯು ಗೋದಾವರೀ ಗಂಹರದಿಂದ ಹೊರಟು ಇತ್ತಕಡೆಗೆ ಬರುತ್ತಾಳೆ.

|| ಸಾಕಿಗಳು ||

ಬಿಳುಪೇರಿವೆ ಬಾಡಿಹವು ಕಪೋಲಂಗಳು ಸುಳಿಮುಂಗುರುಳಲ್ಲಿ ||
ಸುಳಿದಾಡುತ್ತಿವೆ; ಸುಂದರಮುಖಿ ಜಾನಕಿ ಬರುವಳು ವನದಲ್ಲಿ || ೪ ||

ಕರುಣಾರಸದಾಕೃತಿಯೊ ಸತಿಯೈ ಮಿಥಿಲೇಂದ್ರಾನ್ವಯಜಾತೆ ॥
ವಿರಹವ್ಯಥೆಯೋ ಪ್ರತ್ಯಕ್ಷಮೆನಲ್ ತೋರುವಳೀ ಬಹ ಸೀತೆ ॥ ೫ ॥

ಮುರಲೆ—ಹೌದು ! ಇವಳು ಜಾನಕಿಯೇ.

॥ ಮಾಲಿನೀವೃತ್ತ ॥

ಅಸಿಯಳಸಿಯ ಬೆಳ್ಪಿಂತಿರ್ಪ ಮೈಗೊಂಚಲಿಂಥೇ ।
ದಿಸಿದ ಕಿಸಲಯಂಬೊಲ್ ಕೋಮಲಂ ಬಾಡುತಿರ್ಕುಂ ॥
ಅಸುವಳಿಸುವಳಲ್ಲತ್ಯುಗ್ರಕಂ, ಮಾಗಿನೇಸರ್ ।
ಬಿಸಿಗೆ ಬಳಲುವಂತಾ ಕೇತಕೀಗರ್ಭಪತ್ರಂ ॥ ೬ ॥

( ಹೀಗೆ ಇಬ್ಬರೂ ಹೊರಟು ಹೋಗುತ್ತಾರೆ. ಇದು ವಿಷ್ಕಂಭವು. )

( ಬಳಿಕ ಹೂವುಗಳನ್ನು ಕೊಯ್ಯುತ್ತಾ, ಕಾರುಣ್ಯದಿಂದಲೂ ಲವಲವಿಕೆಯಿಂದಲೂ ಆಲಿಸಿ ಕೇಳುತ್ತಾ ಜಾನಕಿಯು ಬರುತ್ತಾಳೆ. )

ಸೀತೆ—ಓಹೋಯ್ಯಾ! ನನ್ನ ಜೀವದಗೆಳತಿಯಾದ ವಾಸಂತಿಯ ಮಾತು ಕೇಳಿಸುತ್ತದೆ !

( ಪಡದೆಯಲ್ಲಿ ಶಬ್ದವಾಗುತ್ತದೆ. )

॥ ಮಂದಾಕ್ರಾಂತಂ ॥

ಹಿಂದಕ್ಕಾಸಲ್ಲಕಿಯ ಚಿಗುರಂ ಕೊಯ್ದು ಕೊಟ್ಟೋವಿದಳ್ ಕೈ ।
ಯಿಂದೀ ಸ್ತಂಬೇರಮಕಲಭನಂ ಲೋಲನಂ ಸೀತೆಮಾತೆ ॥

ಸೀತೆ—( ನಡುವೆ ಮಾತಾಡುತ್ತಾಳೆ ) ಆದರೆ ಆತನಿಗೇನಾಯಿತು ?

( ಮತ್ತೆ ಪಡದೆಯಲ್ಲಿ ಶಬ್ದವಾಗುತ್ತದೆ. )

ಇಂದಂಬುಕ್ರೀಡೆಯೊಳಿರೆ ವಧೂಸಂಗತಂ ತಾನದಂಬೇ ।
ರೊಂದೋಡುತ್ತೋಡಿಸುವೆನೆನುತಂ ಬಂತು ಮತ್ತಂ ಗಜೇಂದ್ರಂ ॥ ೭ ॥

ಸೀತೆ—( ಗಾಬರಿಯಾಗಿ ಕೆಲಹೆಜ್ಜೆಗಳನ್ನು ಮುಂದಕ್ಕಿಟ್ಟು ) ಆರ್ಯಪುತ್ರರೇ, ಆರ್ಯಪುತ್ರರೇ, ಆ ನನ್ನ ಪ್ರೀತಿಯ ಕುಮಾರನನ್ನು ಕಾಪಾಡಿರಿ ಕಾಪಾಡಿರಿ. ( ಮತ್ತೆ ಚನ್ನಾಗಿ ಧ್ಯಾನಕ್ಕೆತಂದು ) ಅಯ್ಯೋ ಅದೃಷ್ಟವೇ ! ಈ ಪಂಚವಟೀ ದರ್ಶನದಿಂದ ದುರ್ದೈವಿಯಾದ ನನ್ನ ಮುಖದಿಂದ ಪೂರ್ವಾಭ್ಯಾಸದ ಅವೇ ಅಕ್ಷರಗಳು ಹೊರಡುತ್ತವೆ. ಹಾ ಪ್ರಾಣಪತಿಯೇ, ನನ್ನ ಶಬ್ದವು ನಿಮ್ಮ ಕಿವಿಗಳಿಗೆ ಇನ್ನು ಹ್ಯಾಗೆ ಕೇಳಿಸೀತು ? ( ಎಂದು ಮೈಮರೆಯುತ್ತಾಳೆ. )

( ಇಷ್ಟರಲ್ಲಿ ತಮಸಾದೇವಿಯು ಬರುತ್ತಾಳೆ. )

ತಮಸೆ—ಏಳು ಮಗಳೇ ಜಾನಕಿ, ಏಳವ್ವಾ !

( ಪಡದೆಯಲ್ಲಿ ಶಬ್ದವಾಗುತ್ತದೆ. )

ಎಲೈ ವಿಮಾನರಾಜಾ, ನೀನು ಇಲ್ಲೇ ನಿಲ್ಲಬೇಕು.

ಸೀತೆ—( ಅಂಜುತ್ತಾ, ನಡುಗುತ್ತಾ, ಉಲ್ಲಾಸಪಡುತ್ತಾ ಎದ್ದು ) ಶಿವಯ್ಯಾ ! ನೀರುತುಂಬಿದ ಮೇಘದ ಗರ್ಜನೆಯಂತೆ ಈ ಗಂಭೀರಧ್ವನಿಯು ಎಲ್ಲಿಂದಾಗಿಗ ಬಹುದು ? ಈ ಘೋಷವು ನನ್ನ ಕರ್ಣರಂಧ್ರದಲ್ಲಿ ಹೊಕ್ಕು ಮಂದಭಾಗ್ಯಳಾದ ನನಗೆ ಇದೇಕ್ಷಣದಲ್ಲಿ ಜೀವದಾನವನ್ನು ಕೊಟ್ಟಿತು.

ತಮಸೆ—( ವಾತ್ಸಲ್ಯದಿಂದ ಕಣ್ಣಿಗೆ ನೀರುತಂದು ) ಕೇಳು ಮಗಳೇ !

|| ಇಂದ್ರವಜ್ರವೃತ್ತಂ ||

ಎಲ್ಲಿಂದಿದಾಯ್ತೋ ಧ್ವನಿಯುಸ್ಫುಟಂ ನೀಂ ।
ತಲ್ಲೀನೆಯುತ್ಕಂಠಿತೆಯಿಂತಿದೇನೌ ? ॥
ಫುಲ್ಲಾಕ್ಷಿ ಮೇಘೋದಿತ ಘೋಷದಿಂದೆ ।
ಪ್ರೋಲ್ಲಾಸವಂ ತಾಳ್ದ ಮಯೂರಿಯಂತೆ || ೮ ||

ಸೀತೆ—ಶಿವಾ ತಮಸಕ್ಕಾ, ಅಸ್ಫುಟವೆಂದು ಯಾಕೆ ಅನ್ನುತ್ತೀ ? ನಾನು ಮತ್ತೂ ಕಿವಿಗೊಟ್ಟು ಕೇಳಿದೆನು. ನಿಶ್ಚಯವಾಗಿ ನಮ್ಮ ಪ್ರಾಣವಲ್ಲಭರೇ ಮಾತಾಡುತ್ತಾರೆ.

ತಮಸೆ—ಹೌದು ಹೌದು ! ತಪೋನಿಷ್ಠನಾದ ಒಬ್ಬ ಶೂದ್ರನನ್ನು ಶಿಕ್ಷಿಸುವದಕ್ಕಾಗಿ ಇಕ್ಷ್ವಾಕುವಂಶದ ರಾಜೇಂದ್ರನೊಬ್ಬನು ದಂಡಕಾರಣ್ಯಕ್ಕೆ ಬಂದಿದ್ದಾನೆಂದು ಕೇಳುತ್ತೇನೆ.

ಸೀತೆ—ಹೀಗಿದ್ದರೆ ಇದೊಂದು ದೊಡ್ಡ ಭಾಗ್ಯವೆಂದು ತಿಳಿಯುತ್ತೇನೆ. ಯಾಕಂದರೆ ಆ ಭೂಪತಿಯು ಇನ್ನೂ ತನ್ನ ರಾಜಧರ್ಮವನ್ನು ಬಿಟ್ಟಿಲ್ಲ.

( ಮತ್ತೆ ಹಿಂದೆ ಶಬ್ದವಾಗುತ್ತದೆ )

|| ವಸಂತತಿಲಕಂ ||

ಈ ಧಾರುಣೀತರುಮೃಗಂಗಳುಮಾಪ್ತರೆನ್ನ ।
ಆದಂ ವಿನೋದಿಸಿದೆನಿಲ್ಲಿ ಚಿರಂ ಸಭಾರ್ಯಂ ॥

ಹೌದಿಂತಿವಾ ಬಹಳ ನಿರ್ಝರ ಗಂಹರಂಗಳ್ ।
ಗೋದಾವರೀನಿಕಟವದ್ರಿತಟಸ್ಥಲಂಗಳ್ ॥ ೯ ॥

( ಇಷ್ಟರಲ್ಲಿ ರಾಮನ ವಿಮಾನವು ಕೆಳಗಿಳಿಯುತ್ತದೆ. )

ಸೀತೆ—( ರಾಮನನ್ನು ಕಂಡು ) ಓಹೋ ! ಆರ್ಯಪುತ್ರರ ಸ್ಥಿತಿಯು ಏನಾಗಿದೆ? ಪ್ರಭಾತಚಂದ್ರಮಂಡಲದಂತೆ ಬಲು ಬಿಳುಪಾದಂಥ, ಕ್ಷೀಣವಾದಂಥ, ದುರ್ಬಲವಾದಂಥ ಆಕಾರಗಳಿಂದ ಕೂಡಿದ್ದಾರೆ; ಇವರ ಸೌಮ್ಯಗಂಭೀರಪ್ರಭಾವದಿಂದ ಮಾತ್ರ ನನಗೆ ಗೊತ್ತು ಸಿಕ್ಕಿತು; ಇವರೇ ನನ್ನ ಪ್ರಾಣಪತಿಗಳು. ಇವರ ಕ್ಷೀಣದೆಶೆಯನ್ನು ನೋಡಿದರೆ ನನಗೆ ಮೂರ್ಛೆಬರುತ್ತದೆ. ಔವಾ ತಮಸಾದೇವಿ! ನನ್ನನ್ನು ರಕ್ಷಿಸು ಕಂಡಿಯಾ! ( ಎಂದು ಆಕೆಯನ್ನಾಲಂಗಿಸಿ ಮೂರ್ಛಿತಳಾಗುತ್ತಾಳೆ ).

ತಮಸೆ—( ಜಾನಕಿಯನ್ನು ಜೋಕೆಯಿಂದ ಹಿಡಿದು ) ತಂಗೀ ಏಳೌವಾ ಏಳು.

( ಇಷ್ಟರಲ್ಲಿ ಮತ್ತೂ ಹಿಂದೆ ಶಬ್ದವಾಗುತ್ತದೆ. )

ರಾ—ನನಗೆ ಈ ಪಂಚವಟೀದರ್ಶನವಾದುದರಿಂದಃ—

॥ ವಸಂತತಿಲಕಂ ॥

ಇತ್ತಿನ್ನೊಳಿನ್ನಿಗಮಗಲ್ಕೆಯಕಿಚ್ಚು ಗುಪ್ತಂ ।
ಮತ್ತಿಂದು ಹೊತ್ತಿ ಭುಗಿಲೆಂದುರಿವಂತೆ ಶೋಕಂ ॥
ಮುತ್ತುತ್ತದೈ ಅದರ ಧೂಮಸಮೂಹವೆಂಬಂ ।
ಕೆತ್ತಂ ವಿಮೋಹವಿದು ತನ್ನನದಕ್ಕೆ ಮುನ್ನಂ ॥ ೧೦ ॥

ಹಾ ರಮಣಿ ಜಾನಕೀ!

ತಮಸೆ— ಓಹೋ ! ಭಾಗೀರಥಿಯೂ, ಲೋಪಾಮುದ್ರಾದೇವಿಯೂ ಮೊದಲೇ ಈ ಭವಿಷ್ಯವನ್ನು ತಿಳುಕೊಂಡಿದ್ದರಲ್ಲವೇ?

ಸೀತೆ— ( ಎಚ್ಚತ್ತು ) ಔವಯ್ಯಾ! ಏನಿದು?

( ಮತ್ತೂ ಹಿಂದೆ ಶಬ್ದವಾಗುತ್ತದೆ. )

ರಾ— ಹಾ ದೇವಿ! ದಂಡಕಾರಣ್ಯವಾಸದ ಪ್ರಾಣಸಖಿಯೇ ವಿದೇಹರಾಜಕನ್ಯೇ! ( ಹೀಗೆಂದು ಮೈಮರೆಯುತ್ತಾನೆ. )

ಸೀತೆ— ಅಯ್ಯೋ ನನ್ನ ಬಾಳುವೆ ಸುಡಲಿ ! ಇವರು ದುರ್ಭಾಗ್ಯಳಾದ ನನ್ನನ್ನೇ ಧ್ಯಾನಿಸುತ್ತಾ ನಿರುತ್ಸಾಹರಾಗಿ ಕಣ್ಣೆವೆದಿಲನ್ನು ಮುಚ್ಚಿಕೊಂಡು

ಮೂರ್ಛಿತರಾದರು ! ಶಿವಾ ಇನ್ನೇನು ಗತಿ ? ಎಲೈ ಭಾಗ್ಯಶಾಲಿನಿ ತಮಸೇ ಕಾಪಾಡಬೇಕು, ಪ್ರಾಣದೊಡೆಯರನ್ನು ಕಾಪಾಡಬೇಕು. ( ಎಂದು ಕಾಲುಗಳಿಗೆರಗುತ್ತಾಳೆ. )

ತಮಸೆ— ಮಗಳೇ,

॥ ಆರ್ಯಾವೃತ್ತಂ ॥

ನೀನೇ ಜಗತೀನಾಥನ ।
ಜಾನಕಿ, ತೆರಳೆಬ್ಬಿಸಲ್ಕೆ ಕಲ್ಯಾಣೀ ॥
ಈ ನಿನ್ನರಸನ ಜೀವ- ।
ಕ್ಕಾನಂದಸ್ಪರ್ಶಕಂ ಭವತ್ಪಾಣಿ ॥ ೧೧ ॥

ಸೀತೆ— ಹ್ಯಾಗಾದರೂ ಆಗಲಿ, ತಮಸಕ್ಕನು ಹೇಳಿದಂತೇ ಮಾಡುತ್ತೇನೆ ( ಎಂದು ಸಂಭ್ರಮದಿಂದ ರಾಮನ ಸಮೀಪಕ್ಕೆ ಹೋಗುತ್ತಾಳೆ. )

( ಆ ಕರುಣಾಶ್ರುಗಳಿಂದ ಯುಕ್ತಳಾದ ಸೀತೆಯು ಸ್ಪರ್ಶ ಮಾಡಿದ್ದರಿಂದ ಆಹ್ಲಾದಯುಕ್ತನಾಗಿ ಭೂಮಿಯ ಮೇಲೆ ಮಲಗಿದ ರಾಮನು ಬರುತ್ತಾನೆ. )

ಸೀತೆ— ( ಕುಸು ಹರ್ಷಿತಳಾಗಿ ತನ್ನೊಳಗೇ ) ಈ ತ್ರೈಲೋಕ್ಯದೊಡೆಯರ ಮೈಯಲ್ಲಿ ಮತ್ತೆ ಪ್ರಾಣಪ್ರವೇಶವಾದಂತೆ ತೋರುತ್ತದೆ.

ರಾ— ಅಹಾಹಾ! ಏನಿದು!

॥ ವಸಂತತಿಲಕಂ ॥

ದೇವದ್ರುಪಲ್ಲವರಸಂಗಳ ಲೇಪವೇನ್ನೈ? ।
ಜೈವಾತೃಕಾಮೃತಕರಂಗಳ ಸಾರವೇನ್ನೈ ॥
ಕಾವೇರ್ದಜೀವನಮನಂಗಳ ತೃಪ್ತಿಗೈವಾ ।
ಜೀವಾತುಸದ್ರಸದ ಸೇಚನವಾಯ್ತೊ ? ಮೈಗೆ ॥ ೧೨ ॥
ಯಾವಾಗಲುಂ ಮೊದಲಿಗಾಗಿಹ ಸೋಂಕಿದೆನ್ನ ।
ಜೀವೌಷಧಂ ಮನವ ಮೋಹಿಸುವೊಂದುಪಾಯಂ ॥
ಕಾನೇರಿಮೈಗೊಗೆದ ಮೂರ್ಛೆಯು ಮಾಣ್ಬತಾನಂ ।
ದಾವೇಶದಿಂ ಮಗುಳೆ ಮಾಂದ್ಯವ ತರ್ಪುದೆನ್ನೊಳ್ ॥ ೧೩ ॥

ಸೀತೆ—( ಅಂಜುತ್ತಾ, ನಡುಗುತ್ತಾ, ಆನಂದಿಸುತ್ತಾ )
ಈ ಕಾಲದಲ್ಲಿ ಇಷ್ಟಾದದ್ದೇ ನನಗೆ ಪರಮಲಾಭವು.

ರಾ—ನಮ್ಮ ದಯಾಳುವಾದ ಸೀತಾದೇವಿಯೇ ಈಗ ನನ್ನ ಬಳಿಗೆ ಬಂದಳೋ ಏನು ?

ಸೀತೆ—ಔವಯ್ಯಾ ! ಇವರು ಇನ್ನು ಮೇಲೆ ನನ್ನನ್ನು ಹುಡುಕಲಾರಂಭಿಸುತ್ತಾರೋ ಏನು ? ಹ್ಯಾಗೆ ಮಾಡಲಿ ?

ರಾ—ಒಳ್ಳೇದು ನೋಡುತ್ತೇನೆ, ಅಗೋ ಬಂದಳೇನು?

ಸೀತೆ—ತಾಯಿ ತಮಸಕ್ಕ, ಇನ್ನು ನಾವು ಒತ್ತಟ್ಟಿಗೆ ಸರಿಯೋಣ ನಡಿ. ಫಕ್ಕನೇ ನನ್ನನ್ನು ನೋಡಿದರೆ, ಅನುಮತಿಯಿಲ್ಲದೇ ಹತ್ತಿರ ಬಂದದ್ದಕ್ಕೆ ಮಹಾರಾಜರು ಮುನಿದಾರು.

ತಮಸೆ—ಮಗಳೇ, ಭಾಗೀರಥಿಯ ಪ್ರಭಾವದಿಂದ ನೀನು ವನದೇವತೆಗಳಿಗೂ ಅದೃಶ್ಯಳಾಗಿದ್ದೀ. ಅಂಜುತ್ತೀ ಯಾಕೆ?

ಸೀತೆ—ಔವಯ್ಯಾ ಹೌದು! ಈ ಮಾತು ನನ್ನ ಧ್ಯಾನಕ್ಕೇ ಬರಲಿಲ್ಲ.

ರಾ—ಎಲೈ ಜೀವದ ಗೆಳತಿಯೇ ಜಾನಕಿ ಹಾ ಸೀತೇ!

ಸೀತೆ—( ಅತಿ ಶೋಕದಿಂದ ಗದ್ಗದಕಂಠೆಯಾಗಿ ತನ್ನೊಳಗೇ ) ಪ್ರಾಣದೊಡೆಯರೇ, ಇಂದಿನವರೆಗೆ ನಡೆದಿರುವ ಸಂಗತಿಗೆ ಈ ನಿಮ್ಮ ವಚನವು ಯೋಗ್ಯವಲ್ಲ; ನಾನು ನಿಮ್ಮ ಪ್ರಾಣಸಖಿಯಾಗಿದ್ದರೆ ನನ್ನವಸ್ಥೆಯು ಹೀಗೆ ಯಾಕಾಗುತ್ತಿತ್ತು? ಅಥವಾ, ವಜ್ರಹೃದಯಳಾದಂಥ ನನಗೆ ಜನ್ಮಾಂತರದಲ್ಲಿ ಆದರೂ ತಮ್ಮ ದುರ್ಲಭ ದರ್ಶನವನ್ನು ಕೊಡಬಾರದು; ಇಂಥಾ ದುರ್ಭಾಗ್ಯಳಾದ ನನ್ನನ್ನೇ ಶುದ್ಧಾಂತಃಕರಣದಿಂದ ಧ್ಯಾನಿಸುತ್ತ ಇರುವ ಈ ದಯಾಳುಗಳಾದ ಪ್ರಾಣಪತಿಗಳ ವಿಷಯದಲ್ಲಿ ನಾನು ಇಂಥಾ ನಿರ್ದಯಳು ಹ್ಯಾಗಾಗಲಿ? ಇವರಂತಃಕರಣವನ್ನು ನಾನು ಬಲ್ಲೆನು. ನನ್ನಂತರಂಗವನ್ನು ಇವರಾದರೂ ಬಲ್ಲವರೇ. ದೈವದಿಂದ ನನಗೆ ಆಗತಕ್ಕದ್ದು ಆಗಿ ಹೋಯಿತು. ಆ ದೋಷವನ್ನು ಆರ್ಯಪುತ್ರರಿಗೆ ಯಾಕೆ ಹಚ್ಚಲಿ?

ರಾ—( ಎಲ್ಲಾ ಕಡೆಗೆ ನೋಡಿ ಉದಾಸೀನನಾಗಿ ) ಅಕಟಕಟಾ !! ಇಲ್ಲಿ ಯಾರೂ ಇಲ್ಲವಲ್ಲ! ನನ್ನ ಚಿತ್ತಕ್ಕೆ ಭ್ರಾಂತಿಯು ಆಗಿರಬಹುದೇ?

ಸೀತೆ—ಔವಾ, ಭಾಗ್ಯಶಾಲೀ ತಮಸಕ್ಕ, ನನ್ನನ್ನು ನಿರ್ನಿಮಿತ್ತವಾಗಿ ಪರಿತ್ಯಾಗಮಾಡಿದ್ದರೂ ಇವರ ಇಂಥಾ ಅವಸ್ಥೆಯನ್ನು ನೋಡಿದರೆ ಯಾವ ಕಾರಣದಿಂದ ನನ್ನ ಮನಸ್ಸು ಕರಗುತ್ತದೋ ತಿಳಿಯದು.

ತಮಸೆ—ಮಗಳೇ ಹೇಳುತ್ತೇನೆ, ಕೇಳು!

॥ ವಸಂತತಿಲಕ ಯುಗ್ಮವು ॥

ಇನ್ನಾಗದೇ ಪ್ರಿಯುಸವಾಗಮವೆಂದುದಾಸೀ ।
ನ್; ನಿರ್ನಿಮಿತ್ತಮಗಲಿರ್ಪನೆನುತ್ತ ಖಿನ್ನಂ ॥
ಬನ್ನಂಗೊಡಲ್ಕೆ ವಿರಹಂ ಘಟನಾತುರಂ; ಸೌ ।
ಜನ್ಯೋಕ್ತಿಸಂಗತಿಯನಾಲಿಸಿ ಸುಪ್ರಸನ್ನಂ ॥ ೧೪ ॥

ತ್ವನ್ನಾಥನಿಂತು ಕರುಣಾಮಯನಾದನೆಂದು ।
ಕ್ಲಿನ್ನಂ ಕೃಪಾರಸದೊಳೀಕ್ಷಣದಲ್ಲಿ ಮತ್ತೆ ॥
ನಿನ್ನಂತರಂಗವು ಕರಂಗಿತು ಸೀತೆ ವಾತ್ಸ ।
ಲ್ಯಂ ನೋಡಿ ನಿಮ್ಮ ರಘುವಂಶಲಲಾಮನಲ್ಲಿ ॥ ೧೫ ॥

ರಾ—ದೇವೀ ಜಾನಕಿ—

॥ ವಸಂತತಿಲಕಂ ॥

ಆಹಾ! ಪ್ರಸಾದವೇ, ಸುಖಪ್ರದೆ ದೇವಿ ನಿನ್ನ ।
ಸ್ನೇಹಾರ್ದ್ರಶೀತಲನುದಾದುಸು ಸೋಂಕು ನನ್ನ ॥
ದೇಹಕ್ಕೆ ದಿವ್ಯಪರಿತೋಷವನೀವುದಿನ್ನುಂ ।
ಹಾಹಾ! ಮನೋರಮಣಿ ಯಾವೆಡೆಯಿರ್ಪೆ ನೀನು ॥ ೧೬ ॥

ಸೀತೆ— ಈ ಅಪರಿಮಿತಪ್ರಣಯಾತಿರೇಕವುಳ್ಳಂಥ, ಪರಮಾಹ್ಲಾದಕ್ಕೆ ಕಾರಣವಾದಂಥ ಆರ್ಯಪುತ್ರರ ನುಡಿಗಳನ್ನು ಮನದಣಿಯೆ ಕೇಳುವ ನನ್ನ ಜನ್ಮವು ನಿಷ್ಕಾರಣ ಪರಿತ್ಯಾಗದಿಂದ ದೂಷಿತವಾದರೂ ಸಫಲವಾಯಿತು; ನಾನು ಧನ್ಯಳು.

ರಾ—ಇನ್ನು ಸಖಿಯು ಎಲ್ಲಿಂದ ಬರುವಳು? ಇದು ನಿತ್ಯದಲ್ಲಿಯೂ ತದೇಕಧ್ಯಾನದಿಂದ ರಾಮನ ಚಿತ್ತಕ್ಕೆ ಬಂದ ಭ್ರಾಂತಿಯೇ ಸರಿ.

( ಇಷ್ಟರಲ್ಲಿ ಹಿಂದೆ ಶಬ್ದವಾಗುತ್ತದೆ ) ಓಹೋ ಪ್ರಮಾದವಾಯಿತು, ಅನರ್ಥವಾಯಿತು,

॥ ಮಂದಾಕ್ರಾಂತವೃತ್ತ ॥

ಹಿಂದಕ್ಕಾ ಸಲ್ಲಕಿಯಚಿಗುರಂ ಕೊಯ್ದು ಕೊಟ್ಟೀವಿದಳ್ ಕೈ ।
ಯಿಂದೀ ಸ್ತಂಬೇರಮಕಲಭನಂ ಲೋಲನಂ ಸೀತೆಮಾತೆ ॥

ರಾ—( ಕಾರುಣ್ಯದಿಂದಲೂ, ಆತುರದಿಂದಲೂ ) ಆದರೆ ಆತನಿಗೇನಾಯಿತು?

( ಮತ್ತೆ ಹಿಂದೆ ಶಬ್ದವಾಗುತ್ತದೆ. )

ಇಂದುಬುಕ್ರೀಡೆಯೊಳಿರೆ ವಧೂಸಂಗತಂ ತಾನದಂಬೀ ।
ರೋದೋಡುತ್ತೋಡಿಸುವೆನೆನುತಂ ಬಂತು ಮತ್ತಂ ಗಜೇಂದ್ರಂ॥ ೧೭

ಸೀತೆ—ಈ ಕಾಲಕ್ಕೆ ದಾರನ್ನು ಕರೆಯಲಿ? ಮಗನನ್ನು ದಾರು ಬಿಡಿಸುವರು?

ರಾ—ಎಲ್ಲಿ ಅವನು? ಆ ದುರಾತ್ಮನು ಎಲ್ಲಿದ್ದಾನೆ! ಯಾವನು ನನ್ನ ಪ್ರಿಯವಲ್ಲಭೆಯ ಪುತ್ರನಿಗೂ, ಆತನ ಹೆಂಡತಿಗೂ, ಉಪದ್ರವ ಕೊಡುತ್ತಾನಂತೆ ( ಹೀಗೆಂದು ದಿಗ್ಗನೆ ಏಳುತ್ತಾನೆ )

( ಇಷ್ಟರಲ್ಲಿ ಭ್ರಾಂತಳಾದ ವಾಸಂತಿಯು ಬರುತ್ತಾಳೆ. )

ವಾಸಂತಿ—ಯಾರು? ದೊರೆಗಳಾದ ರಘುನಂದನರೇನು?

ಸೀತೆ—ಆಹಾ! ನನ್ನ ಜೀವದ ಗೆಳತಿಯಾದ ವಾಸಂತಿಯೇನು?

ವಾಸಂತಿ—ದೇವಾ ರಾಮಭದ್ರ, ಜಯ ಜಯ!

ರಾ—( ಲಕ್ಷಿಸಿ ನೋಡುತ್ತ ) ಯಾರು? ಪ್ರಾಣಸಖಿಯ ಗೆಳತಿಯಾದ ವಾಸಂತೀದೇವಿಯೋ?

ವಾಸಂತಿ—ಏಳು, ರಘುನಾಥಾ ಬೇಗನೇಳು. ಇಲ್ಲಿಂದ ಜಟಾಯು ಗಿರಿಯ ಶಿಖರದ ದಕ್ಷಿಣಕ್ಕೆ ಇರುವ ಸೀತಾತೀರ್ಥದಿಂದ ಆಚೆ ಗೋದಾವರಿಯನ್ನು ದಾಟಿಬಂದು ನಿಮ್ಮ ದೇವಿಯ ಪ್ರಿಯಪುತ್ರನನ್ನು ಕಾಪಾಡಬೇಕು.

ಸೀತೆ—ಹಾ, ತಂದೇ, ಜಟಾಯುವೇ, ನೀನಿಲ್ಲದ ಜನಸ್ಥಾನವು ಹಾಳಾದಂತೆ ಕಾಣುತ್ತದೆ.

ರಾ— ಅಹಹ! ಈ ಕಥಾಲಾಪಗಳು ಹೃದಯಮರ್ಮವನ್ನು ಕತ್ತರಿಸುತ್ತವೆ.

ವಾಸಂತಿ— ಇತ್ತ ಬರಬೇಕು, ರಘುನಾಥರು ಇತ್ತ ಬರಬೇಕು.

ಸೀತೆ— ತಮಸಕ್ಕಾ, ನಿಶ್ಚಯವಾಗಿ ವನದೇವಿಯೂ ನನ್ನನ್ನು ಕಾಣುವದಿಲ್ಲವೇನೆ?

ತಮಸೆ—ಮಗಳೇ, ಎಲ್ಲ ದೇವತೆಗಳಿಗಿಂತ ಭಾಗೀರಥಿಯ ಮಹಾತ್ಮೆಯು ಹೆಚ್ಚಿನದು. ಯಾಕೆ ಸಂಶಯಪಡುತ್ತೀ?

ಸೀತೆ—ಹಾಗಾದರೆ ನಾವೂ ಇವರ ಹಿಂದೆ ಹೋಗೋಣ ನಡಿಯೌವಾ. (ಎಂದು ಹಿಂದೆ ಹೋಗುತ್ತಾರೆ.)

ರಾ— ಎಲೌ, ಭಗವತೀ, ಗೋದಾವರೀ ನಿನಗೆ ನಮಸ್ಕಾರವು. (ಎಂದು ನಮಸ್ಕಾರ ಮಾಡುತ್ತಾನೆ.)

ವಾಸಂತಿ— (ದೃಷ್ಟಿಸಿ ನೋಡುತ್ತಾ) ದೇವಾ ಶ್ರೀರಾಮಚಂದ್ರಾ, ನಿಮ್ಮ ಆನಂದದ ಸುದ್ದಿಯಾಯಿತು; ಸೀತಾಕುಮಾರನು ತನ್ನ ವಧೂಸಹಿತನಾಗಿ ಜಯೋತ್ಸವದಿಂದ ತಿರುಗಿ ಇಗೋ ಇದಿರು ಬರುತ್ತಾನೆ.

ರಾ— ಕಂದಾ ದೀರ್ಘಾಯುಷ್ಯವಂತನಾಗು. ವಿಜಯಶೀಲನಾಗು.

ಸೀತೆ— ಅಂತೂ ನನ್ನ ಪ್ರಿಯವತ್ಸನು ಇಂಥ ಸಾಮರ್ಥ್ಯವಂತನಾದ ನಲ್ಲವೇ? ಸಂತೋಷವಾಯಿತು.

ರಾ—ದೇವೀ —ಜಾನಕಿ, ನೀನು ಮಹಾಭಾಗ್ಯಶಾಲಿಯು. ಯಾಕಂದರೆ:—

॥ ಶಾರ್ದೂಲವಿಕ್ರೀಡಿತವೃತ್ತಂ ॥

ದೇವೀ, ನೂತನಪಲ್ಲವಂಗಳನು ನಿನ್ನಾ ಕರ್ಣಪೂರಂಗಳಂ ।
ದಾವಂ ಬಾಲಮೃಣಾಲಕೋಮಲರದಾಂಕೂರಂಗಳಿಂದೀಳ್ದನು ॥
ಆವತ್ಸಂ ನವಯೌವನೋಲ್ಲಸಿತಕಲ್ಯಾಣಕ್ಕೆ ಪಕ್ವಾದನ ।
ಶ್ರೀ ವೈದೇಹಿ, ಮದೇಭನು ಗೆಲಿವನೀ ನಿನ್ನಿಂದೆ ಪುತ್ರೀಕೃತಂ ॥ ೧೪ ॥

ಸೀತೆ— ಈತನಿಗೆ ದೀರ್ಘಾಯುಷ್ಯವಿರಲಿ; ಮತ್ತು ಈ ಮಂಗಲಾಕಾರಿಯಾದ ಕರಣಿಯ ವಿಯೋಗವು ಎಂದಿಗೂ ಆಗಬೇಡ.

ರಾ— ಪ್ರಿಯಸಖಿಯೇ, ನೋಡು ನೋಡು! ನಮ್ಮ ವತ್ಸನು ಹೆಂಡತಿಯ ಚಿತ್ತಾನುರಂಜನಮಾಡುವ ಚಾತುರ್ಯವನ್ನಾದರೂ ಕಲಿತಂತೆ ತೋರುತ್ತದೆ.

॥ ವಂಶಸ್ಥವೃತ್ತಂ ॥

ಸ್ವಲೀಲೆಯಿಂದೆತ್ತಿ ಮೃಣಾಲಕಾಂಡಮಂ ।
ದಳತ್ಪಯೋಜಾತಸುಗಂಧವಾರಿಯಂ ॥
ವಿಲೋಲಶುಂಡಾಗ್ರದೆ ... ತೊಯ್ದು ತಾಂ ।
ಮೆಲಲ್ಕೆ ಪೆಣ್ಗೀವನು ... ಖಂಡವಂ ॥ ೧೫ ॥

॥ ವಸಂತತಿಲಕಂ ॥

ತುಂತುರ್ಗಳಿಂ ಸುರಿಪಸುಂಡಿಲಿಂ ಯಥೇಷ್ಟಂ ।
ತಾಂ ತನ್ನಕಾಂತೆ ಭಿಷೇಕವನಾಗಿಪಂ ಮೇಣ್ ॥
ಸಂತಾಪಮಂ ತವಿಸಲಕ್ಕರದಿಂದೆ ತಾಳ್ದಂ ।
ಸಂತೋಷದಿಂ ಕಮಲಪತ್ರದ ಛತ್ರವನ್ನು ॥ ೨೦ ॥

ಸೀತೆ—ಅಕ್ಕಾ, ಈತನಂತೂ ಈಗ ಇಷ್ಟು ಯೋಗ್ಯತೆಯನ್ನು ಹೊಂದಿ ಪವನಾದನು, ಕುಶಲವರು ಇಷ್ಟು ಹೊತ್ತಿಗೆ ಹ್ಯಾಗಿದ್ದಾರಾದೀತೇ ?

ತಮಸೆ—ಹೀಗೇ ಅವರೂ ಇರಬಹುದು.

ಸೀತೆ—ನಾನು ಎಂಥ ಮಂದಭಾಗ್ಯಳಾದೆನಲ್ಲ ? ನಿತ್ಯದಲ್ಲಿ ಪತಿವಿರಹವೊಂದನ್ನಲ್ಲದೇ ಪುತ್ರವಿಯೋಗದುಃಖವನ್ನೂ ಅನುಭವಿಸುತ್ತೇನೆ.

ತಮಸೆ—ಅದೃಷ್ಟಕ್ಕೆ ಉಪಾಯವಿಲ್ಲ.

ಸೀತೆ—ನಾನು ಮಕ್ಕಳನ್ನು ಹಡೆದರೂ ಏನು ಫಲವು ? ಕಿಂಚಿದ್ವಿರಲವಾದಂಥ ಶುಭ್ರವಾದಂಥ ಕೋಮಲವಾದ ಮೊಳಕೆಹಲ್ಲುಗಳಿಂದ ಶೋಭಿಸುವ ಗಲ್ಲಗಳೂ [illegible]ಸವೂ, ಒಪ್ಪುವ ಜುಲ್ಪಿ ಕೂದಲುಗಳೂ ಉಳ್ಳ ನನ್ನ ಬಾಲಕರ [illegible] ದ[illegible]ಗಳನ್ನು ಪ್ರಾಣಪತಿಗಳು ಮುದ್ದಿಟ್ಟು ಆಡಿಸಲಿಲ್ಲ.

ತಮಸೆ—( ಪ್ರೇಮದಿಂದ ) ಮಗಳೇ ಚಿಂತಿಸಬೇಡ. ದೈವಾನುಗ್ರಹದಿಂದ ನಿನ್ನ ಇಷ್ಟಾರ್ಥಗಳೆಲ್ಲ ಕೈಗೂಡುವವು.

ಸೀತೆ—ಅವಯ್ಯಾ! ತಮಸಕ್ಕಾ ಪುತ್ರವೃತ್ತಾಂತ ಶ್ರವಣಮಾತ್ರದಿಂದ ನನ್ನ ಮೊಲೆಗಳು ತೊರೆದು ಹಾಲು ಚಿಮ್ಮುತ್ತವೆ; ಮತ್ತು ಪ್ರಾಣನಾಥರ ಸನ್ನಿಧಾನದಲ್ಲಿರುವದರಿಂದ ನಾನು ಸಂಸಾರಿಣೀಸ್ತ್ರೀಯಂತೆ ಆಗಿದ್ದೇನೆ.

ತಮಸೆ—ಇದನ್ನೇನು ಹೇಳಬೇಕೇ ? ಪ್ರೇಮೋದ್ರೇಕದ ಕಡೆಯ ಫಲವೇ ಇದು. ಮತ್ತು ಪುತ್ರನು ಪುತ್ರಮಾತ್ರವೇ ಅಲ್ಲ. ಮಾತಾಪಿತೃಗಳ ಅಂತಃಕರಣಗಳನ್ನು ಗಟ್ಟಿಯಾಗಿ ಕೂಡಿಸುವಂಥ ಸಂಬಂಧರೂಪವೆಂದು ತಿಳಿಯತಕ್ಕದ್ದು.

॥ ಆರ್ಯಾವೃತ್ತ ॥

ಅತ್ಯಂತಸ್ನೇಹದೆ ದಾ—
ಪತ್ಯಂತಃಕರಣತತ್ವಗಳ ನಿಕರಂ ॥
ನಿತ್ಯದಿ ಮಿಶ್ರಿತಮಾಗಲ—
ಪತ್ಯಾಖ್ಯಂ ಗ್ರಂಥಿ ಜನಿಯಿಕುಂ ರುಚಿರಂ ॥ ೨೧ ॥

ವಾಸಂತಿ—ದೇವಾ, ಇತ್ತಕಡೆಗೆ ನೋಡಬೇಕು.

॥ ವಸಂತತಿಲಕಂ ॥

ಆಲೋಲಸುಂದರನವೋದ್ಗತಬರ್ಹರಮ್ಯಂ ।
ವೆಗಾಲಿಸಿದ್ಧ ಚಿತ್ರಶಿಖಿ ರತ್ನಕಿರೀಟಸಾಮ್ಯಂ ॥
ನಾರೀ ಕದಂಬಕುಜದೊಸ್ಸಲಿಗುಂ ಪ್ರನುತ್ತಂ ।
ಮೇಲಾದ ಸಂತಸದೆ ನಲ್ಲಳ ನಚ್ಚಿಸುತ್ತಂ ॥ ೨೭ ॥

ಸೀತೆ—ಅದೇ ಇದು, ಅದೇ ಈ ಮಯೂರನು.

ರಾ—ಕಂದಾ ನಲಿದಾಡು; ಈವೊತ್ತು ನಾವು ನೋಡಿ ಆನಂದಪಡುತ್ತೇವೆ.

ಸೀತೆ—ತಥಾಸ್ತು. ಮಗುವೇ ಸುಖದಿಂದ ಇರು.

ರಾ—ಎಲೇ ಮಗುವೇ,

ಭ್ರೂಲಾಸ್ಯದಿಂದರುಣರಮ್ಯಕರಾಂತದಿಂದ ।
ತಾಲಂಗಳಿಂ, ನಯನವಿಭ್ರಮಣಂಗಳಿಂದೆ ॥
ಬಾಲತ್ವದೊಳ್ ಕುಣಿಸುತಿರ್ದಳು ನೀರೆ ನಿನ್ನಂ ।
ಲೋಲುಪ್ತಿಯಿಂ ತಿಳಿವೆನಾತ್ಮಜನೆಂದು ನಾನು ॥ ೨೮ ॥

ಏನಾಶ್ಚರ್ಯವಿದು? ತಿರ್ಯಗ್ಜಾತಿಗಳೂ ಪೂರ್ವದ ಪರಿಚಯವನ್ನು ಮರೆಯುವದಿಲ್ಲ!

॥ ವಸಂತತಿಲಕಂ ॥

ವೈದೇಹಿ ರಕ್ಷಿಸಿದಳಾಡುತಿದಾ ಕದಂಬಂ ।
ವೈದೋರ್ಪವೀತರುವಿನೊಳ್ಕೆಲವೀಗಲರ್ಗಳ್ ॥

ಸೀತೆ—( ದಿಟ್ಟಿಸಿ ನೋಡಿ ) ಆರ್ಯಪುತ್ರರು ಒಳ್ಳೇ ಗೊತ್ತುಹಿಡಿದರು; ಇನ್ನೂ ಮರೆತಿಲ್ಲ.

ರಾ—

ಹೌದಿದು ಜಾನಕಿ ಸಹೋದರನಾತೆ ನೃತ್ಯಂ ।
ಗೈದಪ್ಪುದಿಲ್ಲಿ ನಿರೀಕ್ಷಿಯಿದಾಪ್ತಕೃತ್ಯಂ ॥ ೨೯ ॥

ವಾಸಂತಿ—ರಾಮಚಂದ್ರಾ, ಇನ್ನು ಇಲ್ಲಿ ಸ್ವಸ್ಥವಾಗಿ ಆಸನದ ಮೇಲೆ ಕ್ಷಣಮಾತ್ರ ಕೂಡ್ರಬೇಕು:—

॥ ವಸಂತ ತಿಲಕ ॥

ಬಾಳೀವನಾಂತದೊಳದೇ ಇದು ಪಾಸುಗಲ್ ಕೇಳ್ ।
ಬಾಲಾಸಖಿಂಗೆ ಶಯನೀಯವಿದಾಯ್ತು ನಿಂಗೆ ॥
ಲೋಲಾಕ್ಷಿ ಕೊಟ್ಟೆಳೆವುಲ್ಗಳಸಿಲ್ಲಿಸಿಂದಂ ।
ದಾ ಲೀಲೆಯಿಂದಗಲಲಿಲ್ಲವಳಂ ಮೃಗಂಗಳ್ ॥ ೨೫ ॥

ರಾ—ಅಯ್ಯೋ! ಇದನ್ನು ನಾನು ನೋಡಲಾರೆನೆ.

( ಎಂದು ದುಃಖಿಸುತ್ತಾ ಮತ್ತೊಂದು ಕಡೆಗೆ ಹೋಗಿ ಕೂಡ್ರುತ್ತಾನೆ )

ಸೀತೆ—ಅಕ್ಕಾ ವಾಸಂತೀ, ಪ್ರಾಣವಲ್ಲಭರನ್ನೂ, ನನ್ನನ್ನೂ ಏನೇನೋ ತೋರಿ ತೋರಿಸುತ್ತಾ ಎಂಥಾ ದುಃಖದಲ್ಲಿ ಮುಳಗಿಸಿಬಿಟ್ಟೆ? ಅಯ್ಯೋ ಕಷ್ಟವೇ! ಅವರೇ ಈ ಪತಿಗಳು, ಅದೇ ಈ ಪಂಚವಟೀವನವು, ಅವಳೇ ಈ ವಾಸಂತಿಯು, ಆ ಗೋದಾವರೀ ಸಮೀಪದ ಅತಿಪರಿಚಿತವಾದ ವನಸ್ಥಳಗಳೇ ಇವು. ಇವೆಲ್ಲ ನಮ್ಮ ಮಕ್ಕಳಂತಿರುವ ಆಗಿನ ಮೃಗಪಕ್ಷಿವೃಕ್ಷಾದಿಗಳು, ಮತ್ತು ಆಗಿನ ಜಾನಕಿಯೇ ನಾನು, ಇವನ್ನೆಲ್ಲ ನಾನು ಪ್ರತ್ಯಕ್ಷವಾಗಿ ನೋಡುತ್ತೇನೆ. ಆದರೂ ನನಗೆ ಏನೂ ಇದ್ದಂತೆ ಕಾಣವೊಲ್ಲದು. ಆದದ್ದರಿಂದ ಪ್ರಾಣಿಗಳ ಅವಸ್ಥೆಯು ಹೀಗೆಯೇ ವಿಲಕ್ಷಣವಾಗಿದೆಯಲ್ಲವೇ?

ವಾಸಂತಿ—ತಂಗೀ ಜಾನಕೀ, ರಾಮಭದ್ರನ ಅವಸ್ಥೆಯು ಏನಾಗಿ ಹೋಗಿದೆ ಎಂಬದನ್ನು ನೀನು ಹ್ಯಾಗೆ ನೋಡದೇ ಇದ್ದೀಯೆಪ್ಪಾ!

॥ ವಸಂತತಿಲಕ ॥

ಮುನ್ನಂ ಮನಂದಣಿಯೆ ನೋಡೆ ಪ್ರತಿಕ್ಷಣಕ್ಕೆ ।
ನಿನ್ನೀಕ್ಷಣಕ್ಕೆ ರಘುಜಂ ಪ್ರೋತ್ಸಾಹಿಸಿದಂ ॥
ಕನ್ನೈದಿಲಂತೆಸೆವ ಸ್ನಿಗ್ಧ ಶರೀರದಿಂದೆ ।
ತ್ವನ್ನೇತ್ರಯುಗ್ಮಕಂಶಿಶಿರತೆಯಂ ನೆಗಳ್ದಂ ॥ ೨೬ ॥
ಈಗಾಗಿಹಂ ವಿರಹವಿಹ್ವಲಪಾಂಡುಕಾಯಂ ।
ಬೇಗೀತನೇ ರಘುಜನೆಂಬುದು ಕಷ್ಟವಾಯ್ತು ॥
ವೈಗುಂದಿಹಂ ಮನದಳಲ್ಗತಿದುಃಸಹಕ್ಕೆ ।
ಹೀಗಿರ್ದೊಡಂ ರಘುವರಂ ನಯನಾಭಿರಾಮಂ ॥ ೨೭ ॥

ಸೀತೆ—ನೋಡುತ್ತೇನೆ; ಅಕ್ಕಾ ನೋಡುತ್ತೇನೆ.

ತಮಸೆ—ಮಗಳೇ, ನಿತ್ಯದಲ್ಲಿಯೂ ನಿನಗೆ ಪ್ರಿಯಸಂದರ್ಶನ ಲಾಭವು ತಪ್ಪದೇ ಆಗಲಿ.

ಸೀತೆ—ಹಾ ವಿಧಿಯೇ! ನಾನು ಇವರನ್ನು ಬಿಟ್ಟು ಇವರು ನನ್ನನ್ನು ಬಿಟ್ಟು ಇರುವದು ಯಾರಿಗಾದರೂ ಕನಸು-ಮನಸುಗಳಲ್ಲಿದ್ದಿಲ್ಲವಲ್ಲಾ? ಪತಿದರ್ಶನವಾಗಿ ಎಷ್ಟೋ ಜನ್ಮಾಂತರಗಳಾಗಿ ಹೋದಂತೆ ನನಗೆ ಭಾಸವಾಗುತ್ತದೆ. ನನ್ನ ಕಣ್ಣೀರು ಬತ್ತಲೊಲ್ಲವು. ಈಗ ಒಂದು ಮುಹೂರ್ತಮಾತ್ರವಾದರೂ ಈ ಕರುಣಾಮಯರಾದ ಆರ್ಯಪುತ್ರರನ್ನು ಕಣ್ಣಾರೆ ನೋಡುತ್ತೇನೆ. (ಹೀಗೆಂದು ನೋಡಲಾರಂಭಿಸುತ್ತಾಳೆ.)

ತಮಸೆ—(ಪ್ರೇಮಾಶ್ರುಗಳನ್ನು ತಂದು ಅಪ್ಪಿಕೊಂಡು) ಮಗಳೇ, ಏನಿದು?

|| ಮತ್ತೇಭವಿಕ್ರೀಡಿತಂ ||

ಸಂತದುಃಖೋದಿತವಾಗಿ ತುಂಬಿತುಳುಕುತ್ತಿರ್ಪಶ್ರುವಂ ಚೆಲ್ವುದು ।
ಪ್ರಕಟಸ್ನೇಹರಸಂ ಪ್ರಿಯೇಕ್ಷಣಸಮುತ್ಕಂಠಾತಿವಿಸ್ತಾರಿತಂ ॥
ಅಕಲಂಕಂ ಧವಳಂ ಪ್ರಸನ್ನಮಧುರಂ ತ್ವದ್ವೀಕ್ಷಣಂ ಪಾಲ್ಗೊನಲ್ ।
ಸುಕರಂ ತಾನೆನೆ ಮಜ್ಜನಂ ಗೊಳಿಪ್ಪುದೇಂ ತನ್ನಲ್ಲಿ ಪ್ರಾಣೇಶನಂ ॥ ೨೮ ॥

ವಾಸಂತಿ—ಎಲೈ ವನಸ್ಥಳನಿವಾಸಿಗಳಿರಾ?

|| ಶಾರ್ದೂಲವಿಕ್ರೀಡಿತಂ ||

ರಾಜೇಂದ್ರಂ ರಘುನಂದನಂ ವನಕೆ ಬಂದಂ ಮತ್ತ ಮಿಂದೀಗಿದೇ ।
ಭೂಜಂಗಳ್ ಮಕರಂದಮಂ ಸುರಿಸಿ ಪೂವಜ್ಜೊಟ್ಟು ಸಂಪೂಜಿಕೆ ॥
ರಾಜೀವಾದಿಸುಗಂಧಮಂ ವನಸಮೀರಂ ತೀಡುತಂ ವೀಜಿಕೆ ।
ಕೂಜತ್ಪಕ್ಷಿಕುಲಂಗಳಿಂಚರದೆಗಾನಂಗೈಗೆ ಸಂಪ್ರೀತಿಯಿಂ ॥ ೨೯ ॥

ರಾ— ಅಕ್ಕಾ ವಾಸಂತೀ ಬಾ, ಇತ್ತಕಡೆಗೆ ಬಾ, ಇಲ್ಲಿ ಕೂತುಕೊಳ್ಳೋಣ.

ವಾಸಂತಿ—(ಕೂತು ಕಣ್ಣೀರು ತಂದು) ಸ್ವಾಮಿ, ಕುಮಾರಲಕ್ಷ್ಮಣನು ಕ್ಷೇಮದಲ್ಲಿ ಇದ್ದಾನಷ್ಟೇ?

ರಾ—(ಆ ಮಾತಿಗೆ ಕಿವಿಗೊಡದೇ ಮಾತನಾಡುತ್ತಾನೆ)

|| ಮಾಲಿನೀವೃತ್ತ ||

ಕರಕಮಲಗಳಿಂದಿತ್ತಂಬುನೀವಾರದೂರ್ವಾಂ ।
ಕುರಂಗಳ, ಮಿಥಿಲೇಂದ್ರೋದ್ಭೂತೆಕಾಪಾಡಿದಂಥ ॥

ತರುಶಕುನಿಕುರಂಗಾದ್ಯಂಗಳಂ ನೋಡೆ; ಕಲ್ಲುಂ ।
ಕರಗಿಸುವ ವಿಕಾರಂ ನನ್ನ ಚೇತಸ್ಸಿಗಕ್ಕುಂ ॥ ೩೦ ॥

ವಾಸಂತಿ—ದೊರೆಗಳೇ, ನನ್ನ ಮಾತನ್ನು ಲಾಲಿಸಬೇಕು; ಕುಮಾರ ಲಕ್ಷ್ಮಣನು ಸುಖದಿಂದಿದ್ದಾನಷ್ಟೇ ?

ರಾ—(ತನ್ನಲ್ಲಿ) ಅಯ್ಯೋ ವಿಧಿಯೇ ! ಇವಳು "ದೊರೆಗಳೇ, ಸ್ವಾಮಿ ! ಎಂದು ಪ್ರಣಯವಿಲ್ಲದ ಸಂಬೋಧನೆಯನ್ನು ಮಾಡುತ್ತಾಳೆ; ಲಕ್ಷ್ಮಣನಲ್ಲಿ ಮಾತ್ರ ಕುಶಲಪ್ರಶ್ನವನ್ನು ಕೇಳುತ್ತಾಳೆ. ಕಣ್ಣುಗಳಲ್ಲಿ ನೀರುತರುತ್ತಾಳೆ, ಇವಳ ಸ್ವರವು ಗದಗದಿಸುತ್ತದೆ; ಆದಕಾರಣ ಇವಳಿಗೆ ಹ್ಯಾಗೋ ಸೀತಾ ವೃತ್ತಾಂತವು ತಿಳಿದದೆ ಕಂಡಿಯಾ ! (ಅನ್ಯತಾ ಸ್ಪಷ್ಟವಾಗಿ) ಹಾ, ಕುಮಾರ ಲಕ್ಷ್ಮಣನಿಗೆ ಕ್ಷೇಮವದೆ. (ಹೀಗೆಂದು ಅಳುತ್ತಾನೆ)

ವಾಸಂತಿ— ದೊರೆಯೇ! ನೀನು ಹ್ಯಾಗೆ ಇಂಥಾ ಕರ್ಕಶನಾದೆ ?

ಸೀತೆ—ಅಕ್ಕಾ ವಾಸಂತೀ, ಏನು ಕಾರಣ ನೀನು ಹೀಗೆ ಮಾತಾಡುತ್ತೀ? ನನ್ನ ಪ್ರಾಣಪತಿಗಳು ಎಲ್ಲರಿಂದಲೂ ಸವಿಮಾತುಗಳನ್ನು ಆಡಿಸಿಕೊಳ್ಳಲಿಕ್ಕೆ ತಕ್ಕವರಿದ್ದಾರೆ; ಹಾಗೂ ನನ್ನ ಗೆಳತಿಯರಿಗಂತೂ ಅತ್ಯಂತ ಪ್ರಿಯರು.

ವಾಸಂತಿ— ಅಪ್ಪಾ ರಾಮಭದ್ರ,

॥ ವಸಂತತಿಲಕಂ ॥

ನೀನಂಗದಲ್ಲಿ ಸುಧೆ, ಚಂದ್ರಿಕೆ ಲೋಚನಕ್ಕೆ, ।
ನೀನೇ ದ್ವಿತೀಯ-ಹೃದಯಂ, ಮಮಜೀವಮೊಂದು ॥
ನೀನಿಂತು ಸುಂದರಿಯು ಲಾಲಿಸಿ ಮೋಹದಿಂ; ಮ ।
ತ್ತಾ ನೀರೆಯನ್ನೆ—ನುಡಿದೇಂ ಫಲಮಯ್ಯೋ! ಮುಂದೆ ॥ ೩೧ ॥

(ಹೀಗೆಂದು ಮೈಮರೆಯುತ್ತಾಳೆ)

ರಾ— ಮುಂದಿನ ಮಾತನ್ನು ಬಿಟ್ಟದ್ದೂ, ಮೈಮರೆದದ್ದೂ ವಾತ್ಸಲ್ಯಕ್ಕೆ ಯುಕ್ತವೇಸರಿ, ಅಕ್ಕಾ, ಏಳು ಏಳು.

ವಾಸಂತಿ—(ಎದ್ದು) ಹಾಗಾದರೆ, ತಾವು ಇಂಥಾ ಅಯುಕ್ತಕೃತ್ಯವನ್ನು ಯಾಕೆ ಮಾಡಬೇಕಾಗಿತ್ತು?

ಸೀತೆ— ಅಕ್ಕಾ ವಾಸಂತೀ, ಸಾಕು ಸಾಕು ! ಇನ್ನಾದರೂ ಸಾಕು ಮಾಡೌವಾ !

ರಾ— ಜನರಿಗೆ ಸೈರಣೆಯಾಗದೆಂದು.

ವಾಸಂತಿ— ಕಾರಣ?

ರಾ— ಏನೋ ಅದನ್ನು ಅವರೇ ಬಲ್ಲರು.

ತಮಸೆ— ಅವರಿಗೆ ಧಿಕ್ಕಾರವೇ ಯೋಗ್ಯವಾಗಿದೆ.

ವಾಸಂತಿ— ಸರಿ ಸರಿ ! ! ನೆಟ್ಟಗಾಯಿತು:—

॥ ದ್ರುತವಿಲಂಬಿತ ॥

ಕಠಿಣಚಿತ್ತ ಯಶಃ ಪ್ರಿಯನಲ್ತೆ ನೀಂ ।
ಕಟುಯಶಸ್ಸಿದಕುಗ್ರಮದಾವುದೈ ! ॥
ಅಟವಿಯೊಳು ಸಖಿಯೇಂ ಗತಿಯಾದಳ ।
ಕ್ಕಟ ವಿಭೋ ನುಡಿ ಏತಿಳಿದಿರ್ಪೆ ನೀಂ! ॥ ೩೨ ॥

ಸೀತೆ—ಔವಾ ವಾಸಂತೀ, ನೀನೇ ಅತಿ ಕಠಿಣಚಿತ್ತದವಳು. ಯಾಕಂದರೆ:—ಈ ನಿನ್ನ ಮಾತುಗಳಿಂದ ನಮ್ಮಿಬ್ಬರ ದುಃಖವನ್ನು ಹೆಚ್ಚುಮಾಡುತ್ತಿ !

ತಮಸೆ—ಮಗುವೇ, ಇವಳಿಗೆ ನಿಮ್ಮಲ್ಲಿರುವ ಪ್ರೇಮವೂ, ಅದರಿಂದುಂಟಾಗುವ ಶೋಕವೂ ಹೀಗೆ ಮಾತಾಡಿಸುತ್ತವೆ; ಇದು ಅವಳ ದೋಷವಲ್ಲ.

ರಾ—ಅಕ್ಕಾ ವಾಸಂತೀ, ನಾನು ನಿನಗೆ ಇನ್ನು ಏನೆಂದು ಹೇಳಿಕೊಳ್ಳಲಿ?

॥ ವಸಂತತಿಲಕ ॥

ಆ ತನ್ನಿ ತುಂಬಿದ ಬಸುರ್ವೊರೆ ತಾಳದಿರ್ದಳ್, ।
ಭೀತ್ಯೈಕವತ್ಸರಕುರಂಗವಿಲೋಲನೇತ್ರಿ ॥
ಶೀತಾಂಶುಕಾಂತಿಮಯೆ ಬಾಹುಮೃಣಾಲವೃದ್ಧಿ ।
ಭೂತಂಗಳಾಹುತಿ ಲತಾಂಗಿ ದಬಾದಳಯ್ಯೋ ! ॥ ೩೩ ॥

ಸೀತೆ— ಆರ್ಯಪುತ್ರನೆ, ನಿನ್ನ ಅನುಗ್ರಹದಿಂದ ಇನ್ನೂ ಜೀವದಿಂದಿದ್ದೇನೆ.

ರಾ—ಹಾ ಪ್ರಿಯಳೇ ! ಎಲ್ಲಿದ್ದೀ ? ( ಎಂದು ಅಳುತ್ತಾನೆ )

ಸೀತೆ—ಛೀ ಛೀ !! ನನ್ನ ಬಾಳುವೆಸುಡಲಿ! ಆರ್ಯಪುತ್ರರು ಗಟ್ಟಿಯಾಗಿ ಅಳಹತ್ತಿದರಲ್ಲಮ್ಮಾ?

ತಮಸೆ—ಮಗಳೇ, ಪ್ರಸಂಗವೇ ಹೀಗದೆ; ಮಾಡತಕ್ಕದ್ದೇನು? ದುಃಖವನ್ನು ಹೀಗೇ ಕಳೆಯಬೇಕು, ಮತ್ತೊಂದು ಉಪಾಯವಿಲ್ಲ; ಯಾಕಂದರೆ:—

ಶೋಕಾತಿರೇಕಕೆದೆ ತಲ್ಲಣಿಸಲ್ ಪ್ರಲಾಪೋ ।
ದ್ರೇಕಂಗಳಿಂದೆ ತಡೆಯಲ್ಪಡೆಗುಂ ಸುಶುದ್ಧಂ ॥
ಸಾಕಾಗಿ ತುಂಬಿ ತುಳುಕಲ್ ಕೆರೆ ನೀರ್, ಬಿಡಲ್ಕೆ ।
ಬೇಕಂಬುನಿರ್ಗಮನಮಾರ್ಗಮನಾಗವಶ್ಯಂ ॥ ೩೪ ॥

ಈಗಂತೂ ರಾಮಭದ್ರನ ಜೀವಕ್ಕೆ ಹಲವು ಬಗೆಯ ಕಷ್ಟಗಳು ಒದಗಿರುತ್ತವೆ. ಏನುಮಾಡಿಯಾನಮ್ಮಾ ?

॥ ಶಿಖರಿಣೀವೃತ್ತ ॥

ಜಗತ್ತನ್ನಾಳಲ್ವೇಳ್ಕಿದನು ವಿಧಿಯಿಂ ಸ್ವಸ್ಥಮನಸಿಂ ।
ದಗಾಧ ಸ್ತ್ರೀಶೋಕಾಗ್ನಿಗೆ ಹೃದಯಪುಷ್ಪಂ ಕೊರಗುಗುಂ ॥
ಅಗಲ್ದಂ ತನ್ನಿಂ ತಾನಳುವದುಮಭಾವಂ ಬಿಸಿಯುಸುರ್ ।
ಮೊಗಂಬಿಟ್ಟೆನ್ನುಂಬರ್ಪುದು ಪರಮಲಾಭಂ ರುದಿತಮುಂ ॥ ೩೫ ॥

ರಾ— ಹಾ, ಕಷ್ಟವು! ಅತಿಕಷ್ಟವು!

॥ ಶಾರ್ದೂಲವಿಕ್ರೀಡಿತಂ ॥

ಎದೆ ಸೀಳ್ದಿಬ್ಭಾಗಮಾಗದೇವೆನತಿಶೋಕಂ ನೋಯಿಸಲುಂ; ಮೂರ್ಛೆದಾ ।
ಳ್ವುದು ಚೈತನ್ಯವ ನೀಗದೆನ್ನಯಶರೀರಂ ವಿಹ್ವಲಂ ಮಾಡಲೇಂ? ॥
ಪುದುಗಿರ್ಪೀ ವಿರಹಾಗ್ನಿ ಮೈಸುಡುತಮಿರ್ಕುಂ ಬೂದಿಯಂ ಮಾಡದೇ ।
ವಿಧಿ ಹೊಯ್ಯುತ್ತಿಹುದೆನ್ನಸುಂಗೊಳದು ಮರ್ಮಚ್ಛೇದಕಂ ತೀವ್ರದಿಂ ॥ ೩೬ ॥

ಸೀತೆ— ಹೌದು ಹೌದು!

ತಮಸೆ— ಮಗಳೇ ಜಾನಕೀ, ನಿನ್ನ ಮೂಲಕವಾಗಿ ರಾಮಚಂದ್ರನಿಗಾಗುವ ಕಷ್ಟಗಳನ್ನು ನೋಡಿದಿಯಾ?

ಸೀತೆ— ಏನು ಮಾಡಬೇಕು? ನೋಡುವದು ನನ್ನ ಹಣೆಯಲ್ಲಿ ಬರೆದದೆ.

ರಾ— ಎಲೈ! ಅಯೋಧ್ಯಾಪುರನಿವಾಸಿಗಳಿರಾ, ಎಲೈ ದೇಶನಿವಾಸಿಗಳಾದ ಜನಗಳೇ ನಿಮ್ಮನ್ನು ಬೇಡಿಕೊಳ್ಳುತ್ತೇನೆ.

॥ ತರಳವೃತ್ತ ॥

ಅನುಮತಂ ನಿಮಗಲ್ಲ ಮಂದಿರದಲ್ಲಿ ಸಖಿಯಿಹುದೆಂದು, ನಿರ್ ।
ಜನವನಾಂತದಿ ಬಿಟ್ಟೆನಾಂ ತೃಣದಂತೆ ದು ಖಿಸಲಿಲ್ಲವು ॥
ವ[illegible] ನೋಡಿ ಕ[illegible]ಗಿತಿಂದು ಚಿರಾನುಭೂತವನಾಡಿಯುಂ ।
ನೆನ ಕನಾಥನ[illegible]ಲ್ವೆನೀಗಲುಮಾಂ [illegible] ॥ ೩೭ ॥

ತಮಸೆ— ಔಷಯ್ಯ ಔಷಯ್ಯ!! ದುಃಖಸಮುದ್ರವು ತುಂಬಿ ತುಳುಕಲಾರಂಭಿಸಿತು.

ವಾಸಂತಿ—ದೇವಾ, ಆಗಿಹೋದದ್ದಕ್ಕೆ ಉಪಾಯವಿಲ್ಲ; ಧೈರ್ಯವನ್ನು ತಾಳಬೇಕು.

ರಾ—ಅಕ್ಕಾ ಏನು ಮಾತಾಡುತ್ತೀ? ಧೈರ್ಯವೆಂದು!

॥ ಇಂದ್ರವಜ್ರವೃತ್ತ ॥

ಆ ದೇವಿಯಿಂ ಶೂನ್ಯವಿದಾಗಿ ಲೋಕಂ ।
ಮೈದೋರ್ಪುದೀರಾರನೆಯಬ್ದ ಮೀಗಳ್ ॥
ವೈದೇಹಿಯೆಂಬೀ ಹೆಸರುಂ ನಿರಸ್ತಂ ।
ಮೈದಾಳ್ದ ಬಾಳಿಲ್ಲವೆ? ರಾಮನಿನ್ನುಂ ॥ ೩೭ ॥

ಸೀತೆ—ಆರ್ಯಪುತ್ರರ ಈ ವಚನಗಳಿಂದ ನಾನು ಶೋಭಿತಳಾದೆನು.

ತಮಸೆ—ಮಗುವೇ ಜಾನಕೀ, ನೀನು ಮರುಳೆಂದು ತಿಳಿಯುತ್ತೇನೆ; ಯಾಕಂದರೆ:—

॥ ಶಾಲಿನೀವೃತ್ತ ॥

ಏ ಮುಗ್ಧೇ ಹೃದ್ಯಂಗಳಲ್ತೇ ವಚಂಗಳ್ ।
ಪ್ರೇಮಾರ್ದ್ರಂಗಳ್ಶೋಕದಿಂ ದಾರುಣಂಗಳ್ ॥
ವ್ಯಾಮಿಶ್ರಂಗಳ್ ನಂಜಿನಿಂ ಕ್ಷೌದ್ರಧಾರಾ ।
ಸ್ತೋಮಂಗಳ್ ಬೀಳ್ದಪ್ಪುವೀ ನಿನ್ನಮೇಲೆ ॥ ೩೮ ॥

ರಾ—ಅಕ್ಕಾ ವಾಸಂತಿ, ನೋಡು, ನಾನು ಎಂಥಾ ಧೈರ್ಯಶಾಲಿಯು:—

॥ ಮಾಲಿನೀವೃತ್ತ ॥

ಉರಿಯುತುರದಿ ಕೊಂಕಿಂ ನಟ್ಟಿ ಕೂರಂಬಿನಲ್ ಮೇಣ್ ।
ಉರಗನ ವಿಷದಂಶಂ ತಾನೆನಲ್ ಶೋಕಶಲ್ಯಂ ॥
ಉರದೊಳಗಿರಲುಗ್ರಂ ಮರ್ಮಮಂ ಛೇದಿಸುತ್ತಂ ।
ತರಹರಿಸಿದುದಿಲ್ಲೇ ತಾನದೇಂ ಧೀರನಲ್ತೇ? ॥ ೩೯ ॥

ಸೀತೆ—ನಾನು ಎಂಥಾ ದುರ್ದೈವಿಯು? ಮತ್ತೂ ಮತ್ತೂ ಪ್ರಾಣಪತಿಗಳಿಗೆ ಹೀಗೆ ಆಯಾಸವನ್ನು ಕೊಡುತ್ತೇನಲ್ಲ?

ರಾ—ಏನು ಮಾಡಲಿ? ನಾನು ಅತಿಧೈರ್ಯದಿಂದ ಅಂತಃಕರಣವನ್ನು ಎಷ್ಟು ಬಿಗಿಯಲ್ಲಿಟ್ಟು ನಿಶ್ಚಲನಾದರೂ, ಪೂರ್ವಪರಿಚಿತಗಳಾದ ನಾನಾರಮ್ಯ ವಸ್ತುಗಳ ದರ್ಶನದಿಂದ ದುಃಖವು ಹೆಚ್ಚೇ ಆಗುತ್ತದೆ.

॥ ಮತ್ತೇಭವಿಕ್ರೀಡಿತಂ ॥

ಭರದಿಂದೇಳುವ ಶೋಕದುತ್ಕರುಷವಂನೊತ್ತಲ್ಕದಾವಾವ ದು ।
ಷ್ಕರಯತ್ನಂಗಳ ಮಾಳ್ಪೆನಾನವವನಲ್ಲಿಂದಲ್ಲೆ ಹತ್ತೊತ್ತುತುಂ ॥
ತ್ವರದಿ ಚಿತ್ತವಿಕಾರವೊಂದತಿಬಲಂ ಸರ್ವಾಂಗಮಂ ವ್ಯಾಪಿಕುಂ ।
ಮರಲೊಡ್ಡಂ ಸಲಿಲಪ್ರವಾಹವತಿವೇಗಂ ದಾಂಟಿ ಮುಂಬರ್ಪವೊಲ್ ॥ ೪೦ ॥

ಸೀತೆ—ಪ್ರಾಣಪತಿಗಳ ಈ ತಡಿಯಕೂಡದ ಅತಿ ತೀಕ್ಷ್ಣವಾದ ದುಃಖೋದ್ರೇಕದಿಂದ ನನ್ನ ಅಳಲು ಹೆಚ್ಚಾಗಿ, ಎದೆಯು ಥರಥರಿಸುತ್ತದೆ.

ವಾಸಂತಿ—( ತನ್ನೊಳಗೇ ) ಬಹು ಕಷ್ಟವಾಯಿತು; ರಾಮಭದ್ರನು ಹೆಚ್ಚಾಗಿ ಬಳಲಿದನು. ಆದುದರಿಂದ ಈತನ ಚಿತ್ತವನ್ನು ಮತ್ತೊಂದು ಕಡೆಗೆ ಒಯ್ಯಬೇಕು. ( ವ್ಯಕ್ತವಾಗಿ ) ಇನ್ನು ದೊರೆಗಳು ಚಿರಕಾಲವಾಸಮಾಡಿ ಪರಿಚಿತವಾಗಿರುವ ಜನಸ್ಥಾನದ ಭಾಗಗಳನ್ನು ನೋಡಿ, ಆನಂದವನ್ನು ಹೊಂದಬಹುದು.

ರಾ—ಒಳ್ಳೇದು! ( ಎಂದು ಎದ್ದು ನಿಲ್ಲುತ್ತಾನೆ. )

ಸೀತೆ—ಪ್ರಿಯಸಖಿಯು ದುಃಖನಿವಾರಣಕ್ಕೆ ಯಾವ ಉಪಾಯಗಳನ್ನು ಕಲ್ಪಿಸಿರುವಳೋ, ಅವು ದುಃಖೋದ್ದೀಪಕವಾಗಿರುತ್ತವೆ. ಇನ್ನು ಏನೇನು ತೋರುವಳೋ ತಿಳಿಯದು.

ವಾಸಂತಿ—ರಘುನಾಥಾ ನೋಡು,

॥ ಶಾರ್ದೂಲವಿಕ್ರೀಡಿತಂ ॥

ನೋಡುತ್ತಿದ್ದಿ ಇದೇ ಲತಾಭವನದೊಳ್ ನೀನಾ ಸಖೀಮಾರ್ಗಮಂ ।
ನಾಡುತ್ತಂಚೆಗಳಿಂದ ನಿಂದಳವಳಾ ಗೋದಾವರೀ ತೀರದೊಳ್ ॥
ಬಾಡಿರ್ಪಂತಿಹ ನಿನ್ನ ನೋಡುತೆ ಬರುತ್ತಿರ್ಪಾಕೆಯಿಂ ಭೀತಿಯಿಂ ।
ಮಾಡಲ್ಪಟ್ಟಿತು ಕಂಜಕುಟ್ಮಲನಿಭಂ ಮುಗ್ಧಂ ಪ್ರಣಾಮಾಂಜಲಿ ॥ ೪೧ ॥

ಸೀತೆ—ಔಮಾ ವಾಸಂತಿ, ನೀನು ಕಲ್ಲುಮನಸ್ಸಿನವಳು; ಅತಿಕರ್ಕಶಳಾಗಿದ್ದೀ! ಯಾಕಂದರೆ:—ಹೃದಯದ ಗುಪ್ತಮರ್ಮವನ್ನು ಚುಚ್ಚುವ ಮುಳ್ಳಿ

ನಂಥ ಈ ವಾಕ್ಯಗಳಿಂದ ಪ್ರಾಣಪತಿಗಳನ್ನೂ, ದುರ್ಭಾಗ್ಯಳಾದ ನನ್ನನ್ನೂ ಮೇಲಿಂದ ಮೇಲೆ ನೋಯಿಸುತ್ತೀಯೇ!

ರಾ—( ದುಃಖಪೀಡಿತನಾಗಿ ) ಎಲೇ ಕಲ್ಲೆದೆಯವಳೇ ಜಾನಕೀ, ಅತ್ತಿತ್ತ ಸುಳಿದಾಡಿದಂತೆ ಕಾಣುತ್ತೀ! ಆದರೂ ನನ್ನಲ್ಲಿ ನಿನಗೆ ಅಂತಃಕರಣವಿಲ್ಲವೇ? ಓಹೋ! ಈಗ ಇಲ್ಲಿದ್ದಳು! ಈಗಕಾಣಿಸುವದಿಲ್ಲ!

|| ಮಂದಾಕ್ರಾಂತ ||

ಹಾಹಾ! ದೇವೀ, ಒಡೆದುದೆದೆ, ಬಿಚ್ಚುತ್ತಿವೀ ದೇಹಕೀಲ್ಗಳ್ ।
ಹಾ! ಹಾಳಾಯ್ತು ಜಗತಿಯಿದರೊಳ್ಬೆಂಕಿಯಿಂ ದಗ್ಧನಪ್ಪೆಂ ॥
ಹಾಹಾ! ಬೀಳ್ದಂ ಘನತಿಮಿರದಲ್ಲಾಂತರಾತ್ಮಂ ವಿಮುಕ್ತಂ ।
ಮೋಹಂ ಸರ್ವಾಂಗವ ಮುಸುಕಿತಿನ್ನೇನೆನೀ ಮಂದಭಾಗ್ಯಂ ॥ ೪೨ ॥

( ಹೀಗೆನ್ನುತ್ತ ಮೂರ್ಛೆಹೋಗುತ್ತಾನೆ )

ಸೀತೆ—ಅಯ್ಯೋ ದೈವವೇ! ನನಗೆ ಧಿಕ್ಕಾರವಿರಲಿ, ಪತಿಗಳು ಮತ್ತೆ ಮೈಮರೆದರು!

ವಾಸಂತಿ—ದೇವಾ, ಏಳಬೇಕು, ಏಳಬೇಕು.

ಸೀತೆ —ಅಯ್ಯೋ ಆರ್ಯಪುತ್ರರೇ! ಮಂದಭಾಗ್ಯಳಾದ ನನ್ನ ಮೂಲಕವಾಗಿ ಸಕಲಪ್ರಾಣಿಗಳ ಜೀವಕ್ಕೆ ಮಂಗಳಕರವಾದ ನಿಮ್ಮ ಜನ್ಮಕ್ಕೆ ಮೇಲಿಂದ ಮೇಲೆ ಪ್ರಾಣಭೀತಿಯನ್ನೇ ತರುವ ಇಂಥಾ ದಾರುಣವಾದ ಅವಸ್ಥೆಯುಂಟೆ? ಸುಡುಸುಡು ನನ್ನ ಬಾಳಿಕೆಯನ್ನು! ( ಎಂದು ಮೂರ್ಛಿತಳಾಗುತ್ತಾಳೆ )

ತಮಸೆ—ಏಳು ಮಗಳೇ ಏಳು, ನಿನ್ನ ಕೈದಾವರೆಯ ಸ್ಪರ್ಶವೇ ರಾಮಭದ್ರನಿಗೆ ಸಂಜೀವನವಾಗಿದೆ; ಅದರಿಂದ ಅಂಜಬೇಡ. ಏಳು ಕಂಡಿಯಾ.

ವಾಸಂತಿ—ಹಾ! ಪ್ರಿಯಸಖೀ, ಜಾನಕೀ! ಎಲ್ಲಿರುವಿ? ನಿನ್ನ ಜೀವಿತೇಶ್ವರನನ್ನು ಬದುಕಿಸಿಕೊಳ್ಳಬಾರದೇ?

ಸೀತೆ—( ಎಚ್ಚತ್ತು ) ರಾಮನ ಎದೆಗೂ ಹಣೆಗೂ ಸ್ಪರ್ಶಮಾಡುತ್ತಾಳೆ.

ವಾಸಂತಿ—ಶ್ರೀರಾಮನು ಮತ್ತೆ ಎಚ್ಚತ್ತನು! ಇದೇ ನನ್ನ ಮಹಾಭಾಗ್ಯವು.

ರಾ—( ಎದ್ದು ಕೂತು ಮಾತಾಡುತ್ತಾನೆ )

|| ಮಾಲಿನೀವೃತ್ತ ||

ಒಡಲೊಳಹೊರಮುಗ್ಗಲ್ಗಳ್ಗೆ ಪೀಯೂಷಲೇಪಂ ।
ದೊಡೆದಪುದೆನಿಸೀ ಸಂಸ್ಪರ್ಶವೆನ್ನಂಗವನ್ನು ॥

ಬಿಡುವಸುಗಳ ಮತ್ತೀಗಳ್ ಮರಳ್ವುತ್ತ್ಕಸ್ಮಾತ್ ।
ಕೊಡುತಿಹುದತಿಹರ್ಷಾವೇಶದಿಂ ಮಾಂದ್ಯವನ್ನು ॥ ೪೨ ॥

( ಆನಂದದಿಂದ ಕಣ್ಮುಚ್ಚಿಕೊಂಡು ) ಅಕ್ಕಾ ವಾಸಂತಿ, ನೀನು ಮಹಾಭಾಗ್ಯ ಶಾಲಿಯು.

ವಾಸಂತಿ—ದೇವಾ, ಅದೇಕೆ?

ರಾ—ಅಕ್ಕಾ ಇನ್ನೇನು? ಜಾನಕಿಯು ಮತ್ತೆ ಬಂದಳು.

ವಾಸಂತಿ—ಅಪ್ಪಾ ರಾಮಚಂದ್ರಾ, ಪ್ರಿಯಸಖಿಯು ಎಲ್ಲಿದ್ದಾಳೆ?

ರಾ— ( ಜಾನಕಿಯ ಸ್ಪರ್ಶವನ್ನು ಅನುಭವಿಸುತ್ತಾ ) ನೋಡು! ಇಗೋ! ಇವಳೇ; ನನ್ನ ಮುಂದೇ ನಿಂತಿದ್ದಾಳೆ.

ವಾಸಂತಿ—ದೇವಾ, ಏನುಕಾರಣ ಹೀಗೆ ಮರ್ಮವನ್ನು ಭೇದಿಸುವಂಥ, ದಾರುಣವಾದಂಥ, ಅನರ್ಥದ ವಾಕ್ಯಗಳಿಂದ ಜೀವದಗೆಳತಿಯ ದುಃಖದಿಂದ ಸಂತಪ್ತಳಾದ ಮಂದಭಾಗ್ಯಳಾದ ನನ್ನನ್ನು ಮತ್ತು ಮತ್ತು ದುಃಖಪಡಿಸುತ್ತೀ?

ಸೀತೆ—ನಾನು ಇಲ್ಲಿಂದ ದೂರ ಹೋಗಲಿಚ್ಛಿಸುತ್ತೇನೆ; ಬಹುಕಾಲದ ವರೆಗೆ ಅನುಭವಸಿದ್ಧವಾದಂಥ ಸೌಮ್ಯಶೀತಲವಾದಂಥ ಆರ್ಯಪುತ್ರರ ಸ್ಪರ್ಶದಿಂದ ದಾರುಣದೀರ್ಘ ಸಂತಾಪವು ಕಡಿಮೆಯಾಗತಕ್ಕದ್ದು. ಹೀಗಿದ್ದು ನನ್ನ ಕೈಯು ನಡುಗುತ್ತದೆ; ಮೈಯಲ್ಲಾ ಕಾವೇರಿತು, ಬೆವರುತ್ತದೆ; ವೇದನೆಯನ್ನು ತಾಳಲಾರೆನು; ಹಸ್ತವು ವಜ್ರಲೇಪವಾದಂತೆ ಜಡವಾಯಿತು; ನನ್ನ ಸ್ವಾಧೀನದಲ್ಲಿ ನಿಲ್ಲಲಿಲ್ಲ; ಇನ್ನೇನು ಮಾಡಲಿ?

ರಾ—ಅಕ್ಕಾ ವಾಸಂತೀ, ನನ್ನ ಮಾತು ಅನರ್ಥವೆನ್ನುತ್ತೀಯಾ? ಹಾಗಲ್ಲ ನೋಡು!

॥ ವಂಶಸ್ಥವೃತ್ತ ॥

ಮೊದಲ್ ವಿಹಾಹೋಕ್ತವಿಧಾನದಿಂ ಧೃತಂ ।
ಮುದಪ್ರದಂ ಯಾವದು ಕಂಕಣೋಜ್ವಲಂ ॥
ಸುಧಾಸುಖಸ್ಪರ್ಶಕರಂ ಸುನಿಶ್ಚಿತಂ ।
ಸುದೀರ್ಘಕಾಲಾನುಭವಪ್ರಮಾಣದಿಂ ॥ ೪೩ ॥

ಸೀತೆ—( ತನ್ನೊಳಗೆ ) ಆರ್ಯಪುತ್ರರೇ! ತಾವಾದರೂ ಆಗಿನವರೇ.

ರಾಮನು—

ಅದೇ ಇದೌ ಕಾಂತೆಯ ಕೈದಳಿರ್ ಶುಭಾ ।
ಸ್ವದು ಹಿಮಸ್ತೋಮಸಮಂ ಸುಮಂಜುಲಂ ॥
ಮೃದುತ್ವದಿಂದಂ ಲವಲೀಸುಪಲ್ಲವಂ ।
ಸುದೈವದಿಂ ಬಂದುಮ ಕೈಯೊಳಿನ್ನೆಯ ॥ ೪೪ ॥

ಸೀತೆ—ಔವಯ್ಯಾ!! ಇನ್ನೆನುಗತಿ? ಆರ್ಯಪುತ್ರರ ಸೊಂಕಿನಿಂದ ನಾನು ಮೋಹಿತಳಾದೆನು. ಕಾರಣ ನನ್ನಿಂದ ಬಹು ದೊಡ್ಡ ತಪ್ಪು ಆಯಿತು.

ರಾ—ಅಕ್ಕಾ ವಾಸಂತೀ, ಸ್ಪರ್ಶಾನಂದದಿಂದ ನನಗೆ ಆಲಸ್ಯವು ಬಂದವೆ; ಆದುದರಿಂದ ನಾನು ಪರವಶನಾಗಿದ್ದೇನೆ; ಕಾರಣ ನೀನು ಈಕೆಯನ್ನು ನೋಡು. ಹೌದೋ ಅಲ್ಲವೋ ?

ವಾಸಂತಿ—ಹಾ ವಿಧಿಯೇ ! ಎಂಥಾ ವಿಪತ್ತನ್ನು ತಂದಿ ? ಈ ರಾಮಭದ್ರನಿಗೆ ಉನ್ಮಾದವೇ ಆಯಿತು; ಎಲ್ಲಿಯ ಸೀತೆಯೇ ! ಎಲ್ಲಿಯ ಸ್ಪರ್ಶವೋ ! ಸುಮ್ಮನೆ ಬಡಬಡಿಸುತ್ತಾನೆ. ( ಇಷ್ಟರಲ್ಲಿ ಸೀತೆಯು ತನ್ನ ಕೈಕೊಸರಿಕೊಂಡು ಹಿಂದಕ್ಕೆ ಸರಿಯುತ್ತಾಳೆ. )

ರಾ—ಅಹಹ !! ಪ್ರಮಾದವಾಯಿತು, ಹೋಯಿತು !

॥ ವಸಂತತಿಲಕಂ ॥

ಆಕಂಪಿಸುತ್ತೆ, ಬೆವರುತ್ತೆ, ಜಡತ್ವಮಂ ತಾ ।
ಳ್ದಿ ಕೋಮಳಾಂಗನೆಯ ಕೈದಳಿರೀಗಕಸ್ಮಾತ್ ॥
ಆಕಂಪಿಸುತ್ತೆ, ಬೆವರುತ್ತನಧೀನವಾದಂ ।
ನೀ ಕೈಯ ತಾಂ ಕೊಸರಿಕೊಂಡುದು ಮಾಯವಾಯ್ತು ॥ ೪೫ ॥

ಸೀತೆ—ಹಾ! ಪ್ರಾಣಪತಿಗಳ ದೃಷ್ಟಿಯು ಅವ್ಯವಸ್ಥಿತವಾಗಿದೆ ಸ್ಥಿರವಿಲ್ಲ; ತಲೆದೂಗುತ್ತಾರೆ; ಇನ್ನೂ ಸ್ಮೃತಿಯಿಲ್ಲ, ಮುಂದೇನುಗತಿ ?

ತಮಸೆ—( ಪ್ರೇಮದಿಂದ ನೋಡುತ್ತಾ ) ಸೀತೆಯ ಲಕ್ಷಣವೇ ಬೇರೆಯಾಗಿದೆ:—

ವೈದೇಹಿ ವಲ್ಲಭನ ಸೋಂಕಿನ ಸೌಖ್ಯದಿಂದ ।
ಸ್ವೇದಪ್ರಯುಕ್ತೆ, ಪುಳಕೋತ್ಸವೆ, ಕಂಪಿತಾಂಗಿ ॥
ಆದಳ್ ನಡುಂಗಿ ಪವನಂಗೆ, ನವಾಂಬುವಿಂದ ।
ಶೋದೊಪ್ಪುವಂತಿರೆ ಮುಗುಳ್ತಕದಂಬಶಾಖೆ ॥ ೪೬ ॥

ಸೀತೆ—( ತನ್ನೊಳಗೆ ) "ಈ ಪರಾಧೀನ ಜೀವಿಯಾದ ನಾನು ತಮಸಾದೇವಿಯಿಂದ ಬಹಳವಾಗಿ ನಾಚಿಸಲ್ಪಟ್ಟೆನು; ಆಕಾಲದ ಪತ್ನೀಪರಿತ್ಯಾಗವೇನು ? ಮತ್ತೂ ಈಗಾಗುವ ಪ್ರೇಮಾತಿಶಯವೇನು? " ಹೀಗೆ ಈಕೆಯು ಮನದಲ್ಲಿ ಅನ್ನುತ್ತಿದ್ದಾಳಾದೀತು.

ರಾ—( ಎಲ್ಲಾಕಡೆಗೂ ನೋಡಿ ) ಏನು ? ಇಲ್ಲೇನು ? ಎಲ್ಲೈ! ಕರುಣಾಹೀನಳೇ ಹೋದಿಯಾ ?

ಸೀತೆ—ಹೌದು! ಹೌದು! ನಾನು ನಿಶ್ಚಯವಾಗಿ ಕರುಣಾಹೀನಳು; ಯಾಕಂದರೆ, ಆರ್ಯಪುತ್ರರ ಇಂಥಾ ಕಷ್ಟವನ್ನು ನೋಡುತ್ತಾ ಜೀವದಿಂದ ಇದ್ದೇನಲ್ಲ ?

ರಾ—ಎಲ್ಐ ದೇವಿ, ಎಲ್ಲಿದ್ದೀ? ನನ್ನ ಮೇಲೆ ದಯಮಾಡು? ಈ ರೀತಿಯು ನನ್ನನ್ನು ಬಿಟ್ಟು ನೀನಿರುವದು ಯೋಗ್ಯವಲ್ಲ; ಒಮ್ಮೆ ಪ್ರತ್ಯಕ್ಷಳಾಗು.

ಸೀತೆ—ಪ್ರಾಣಪತಿಯೇ ಇದು ಬಹು ವಿಪರೀತವಾಕ್ಯವು; ಹೀಗಿದ್ದರೆ ಮೊದಲೇ ನನ್ನನ್ನು ಬಿಡಬಾರದಾಗಿತ್ತು.

ವಾಸಂತಿ—ದೇವಾ, ಇನ್ನು ದಯಮಾಡು, ನನ್ನ ಮೇಲೆ ಕರುಣಿಸು, ನಿನ್ನ ಶೋಕವು ಮಿತಿಮೀರಿತು, ನಾನು ನೋಡಲಾರೆನು, ಈ ಪರಮಾವಧಿಗೆ ಬಂದ ವಿಯೋಗದುಃಖವನ್ನು ನೀನೇ ಲೋಕೈಕಧೀರನಾದುವರಿಂದ ನಿಲ್ಲಿಸು. ಇನ್ನು ಜೀವದಗೆಳತಿ ಜಾನಕಿಯು ಎಲ್ಲಿಂದ ಬರುವಳು ?

ರಾ—ನಿಶ್ಚಯವಾಗಿ ಸಖಿಯು ಇಲ್ಲಿಲ್ಲ; ಇದ್ದರೆ ವಾಸಂತಿಗೆ ಕಾಣುತ್ತಿದ್ದಿಲ್ಲವೇ ? ನನಗೆ ಸ್ವಪ್ನ ಬಿದ್ದಿರಬಹುದು; ಒಳ್ಳೇದು, ನಾನು ಮಲಗಿಯೂ ಇಲ್ಲ; ರಾಮನಿಗೆ ನಿದ್ರೆಯಾದರೂ ಹ್ಯಾಗೆ ಬರುವದು? ಆದದ್ದರಿಂದ ಆ ಮಹಾಮಹಿಮೆಯುಳ್ಳ ವಿಯೋಗವೇ ಆಗಿಂದಾಗ್ಗೆ ಸೀತಾಸ್ಪರ್ಶದ ಭ್ರಾಂತಿಗಳನ್ನುಂಟು ಮಾಡುತ್ತಾ, ನನ್ನನ್ನು ಮರುಳುಮಾಡುತ್ತದೆ. ಇದೇ ನಿಶ್ಚಯವು.

ಸೀತೆ—ನಾನೇ ಪ್ರಾಣಪತಿಗಳಿಗೆ ಈ ದುಃಖಕ್ಕೆ ಕಾರಣವಾಗಿದ್ದೇನೆ.

ವಾಸಂತಿ—ದೇವಾ ನೋಡು ನೋಡು.

॥ ಮತ್ತೇಭವಿಕ್ರೀಡಿತಂ ॥

ಇದುನೋಡಿಲ್ಲಿ! ದಶಾಸ್ಯನುಕ್ಕಿನರಥಂ ಭಗ್ನಂಜಟಾಯುಪ್ರಹಾ ।
ರದೆ ಮುನ್ನೋಡಿವು ಗರ್ದಭಂಗಳೆಲುಂಗಳ್ ಪೈಶಾಚವಕ್ತ್ರಂಗಳು ॥
ಇದಱಿಚ್ಛಿನ್ನ ಜಟಾಯುಪಕ್ಷತಿಯಿಗೋ! ದೀವ್ಯತ್ತ್ರಡಿದ್ಗರ್ಭಿತಾಂ ।
ಬುದನಂತಭ್ರುಕೆಪಾರಿದಂ ರಿಪುಕಿಗೊಂಡುದ್ದೀಪ್ತೆಯಂ ಸೀತೆಯಂ ॥ ೪೭ ॥

ಸೀತೆ—( ಅಂಜುತ್ತ ಅಂಜುತ್ತ ) ಓಹೋ ? ಆರ್ಯಪುತ್ರರೇ ! ಮಾಪಂದಿರನ್ನೂ ಖಳನು ಹಿಡಿಸುತ್ತಾನೆ; ನನ್ನನ್ನೂ ಒಯ್ಯುತ್ತಾನೆ; ಬೇಗನೇ ಬಿಡಿಸಿರಿ ಬಿಡಿಸಿರಿ !!

ರಾ—(ತ್ವರದಿಂದೆದ್ದು) ಛೀ! ಛೀ! ಪಾಮರಾಧಮಾ ! ನಮ್ಮಯ್ಯನ ಪ್ರಾಣವನ್ನೂ, ಸೀತೆಯನ್ನೂ, ಅಪಹರಿಸಿಕೊಂಡು ಎಲ್ಲಿ ದಾಟಹೋಗುತ್ತೀ ?

ವಾಸಂತಿ—ದೇವಾ ! ರಾಕ್ಷಸಕುಲದ ಪ್ರಳಯ ಧೂಮಕೇತುವೇ ! ಆ ದುರಾತ್ಮನಾದ ರಾವಣನು ಇನ್ನೂ ನಿನ್ನ ಕೋಪಕ್ಕೆ ಗೋಚರನಾಗಿದ್ದಾನಲ್ಲವೇ ?

ಸೀತೆ— ಎಲಎಲಾ!! ನಾನು ಸುಮ್ಮನೇ ಎಷ್ಟು ಬಡಬಡಿಸಿದೆನಲ್ಲ ?

ರಾ—ಅಯ್ಯೋ! ನನ್ನ ಈ ವ್ಯರ್ಥವಾಕ್ಯಗಳಿಗೆ ಪ್ರಲಾಪವೆಂಬ ಅನ್ವರ್ಥಕನಾಮವು ಒಪ್ಪುತ್ತದೆ.

॥ ಶಾರ್ದೂಲವಿಕ್ರೀಡಿತಂ ॥

ಆ ಮುಗ್ಧಾಕ್ಷಿಯ ಮುನ್ನಗಲ್ಕೆ ಪಗೆಯಂ ಕೊಲ್ವನ್ನವೆಂಬಾಶೆಯಾ ।
ರಾಮಂಗಿತ್ತು; ವಿನೋದವೀವ ಸಬಲೋಪಾಯಂಗಳಂದಿರ್ದವು ॥
ಈ ಮಲೋಕದಿ ವೀರರಂ ಮಥಿಸಲಾಯ್ತುತ್ಸದ್ಭುತಶ್ರೀಯುಮುಂ ।
ಸೀಮಾತೀತವಿಯೋಗವಂ ತಡೆಯಲೆಂತೀಗಯ್ಯೊ! ನಾಂ ಮೌನದಿಂ ॥ ೪೮ ॥

ಸೀತೆ—ಓಹೋ ! ಈ ವಿರಹಕ್ಕೆ ಕಡೆಯೇ ಇಲ್ಲವಷ್ಟೇ ಹಾ ! ಮಂದಭಾಗ್ಯಳಾದ ನಾನು ಸತ್ತೆನು! ಸತ್ತೆನು! ( ಎಂದು ಅಳುತ್ತಾಳೆ )

ರಾ—ಹಾ ! ಕಷ್ಟವು !

॥ ವಸಂತತಿಲಕಂ ॥

ಎಲ್ಲಿರ್ಪೆಯೋ ಸಖಿ, ಕಪೀಂದ್ರನ ಸಖ್ಯವಲ್ಲಿ ।
ನಲ್ಲೇ, ನಿರರ್ಥಮಫಲಂ ಕಪಿಚಕ್ರವೀರ್ಯಂ ॥
ಅಲ್ಲಿಲ್ಲ ವೇಗನಿಧಿಮಾರುತಿಯಾ ಪ್ರಯಾಣಂ ।
ಕಲ್ಲಾಯ್ತು ಜಾಂಬವನ ವಿಸ್ತೃತಬುದ್ಧಿಶಕ್ತಿ ॥ ೪೯ ॥
ಆ ವಿಶ್ವಕರ್ಮಸುತನಪ್ಪನಳಂಗಮುಧ್ವಂ ।
ಗೈವಾರ್ಪದಿಲ್ಲ ಸಖಿ ನೀನಿರುವಲ್ಲಿಗೀಗಳ್ ॥
ಅವ್ವಾ ವಿಶ್ಲಾಪತಿಕತಂ ಬರಗಾಣದಲ್ಲಿಂ ।
ದಾವಲ್ಲಿ ಪೋದೆ! ಪೊಗದೋರೆನಗೊಮ್ಮೆ ನೀರೆ ॥ ೫೦ ॥

ಸೀತೆ—ಔವಯ್ಯಾ! ಆ ಮೊದಲಿನ ವಿರಹವು ಇದಕ್ಕಿಂತ ಬಹಳ ಪಾಲಿಗೆ ಬೇಕಾಗಿತ್ತೇ!

ರಾ—ಎಲೈ ಪ್ರಿಯಸಖಿಯೇ, ಅಕ್ಕಾ ವಾಸಂತೀ, ಇನ್ನುಮೇಲೆ ಬಾಂಧವರಿಗೆ ರಾಮನ ದರ್ಶನವು ದುಃಖಕ್ಕಾಗಿಯೇ ಸರಿ! ಈ ಅಳಲು ನಿನ್ನನ್ನು ಎಷ್ಟು ದಿವಸಗಳ ವರೆಗೆ ಅಳಿಸುತ್ತಿರುವದೋ, ತಿಳಿಯದು. ಕಾರಣ ನನ್ನ ಪ್ರಯಾಣಕ್ಕೆ ನಿರೂಪವನ್ನು ಕೊಡಕ್ಕಾ.

ಸೀತೆ—(ಖಿನ್ನಳಾಗಿ ತಮಸೆಯನ್ನು ಅಪ್ಪಿ) ಔವಾ ತಮಸಕ್ಕಾ, ಪ್ರಾಣಕಾಂತರು ಹೊರಟರಲ್ಲೇ! ಹ್ಯಾಗೆ ಮಾಡಲಿ ?

ತಮಸೆ—ಮಗಳೇ ಸೀತೆ, ನಡಿ ನಾವೂ ಕುಶಲವರ ಆಯುಷ್ಯವೃದ್ಧ್ಯರ್ಥವಾಗಿ ಮಂಗಳಕಾರ್ಯಗಳನ್ನು ಮಾಡಲಿಕ್ಕೆ ಭಾಗೀರಥಿಯ ಚರಣಸನ್ನಿಧಾನಕ್ಕೆ ಹೋಗೋಣ ಬಾ.

ಸೀತೆ—ತಮಸಕ್ಕಾ, ತುಸು ತಾಳು, ಈ ಪ್ರಿಯಪತಿಗಳ ಸಂದರ್ಶನವು ಇನ್ನುಮೇಲೆ ದುರ್ಲಭವಾಗುತ್ತದೆ; ಒಂದುಕ್ಷಣಮಾತ್ರವಾದರೂ ಕಣ್ಣುತುಂಬ ನೋಡುತ್ತೇನೆ.

ರಾ—ಸದ್ಯಕ್ಕಂತೂ ನನಗೆ ಅಶ್ವಮೇಧಕ್ಕೋಸ್ಕರ ಸಹಧರ್ಮಿಣಿಯು ಇರುತ್ತಾಳಷ್ಟೇ !

ಸೀತೆ—(ಆಕ್ಷೇಪದಿಂದ) ಆ ! ಆರ್ಯಪುತ್ರರೇ ಯಾರವಳು ?

ರಾ—(ಪೂರ್ವೋಕ್ತವನ್ನು ಪೂರ್ಣಮಾಡುತ್ತಾನೆ) ಹಿರಣ್ಮಯ ಸೀತಾಮೂರ್ತಿಯು.

ಸೀತೆ—(ಉಸುರ್ಗರೆಯುತ್ತ ಕಣ್ಣೀರು ತಂದು) ನಾನು ಧನ್ಯಳು. ಈಗ ಮಾತ್ರ ಪ್ರಾಣನಾಥರು “ಆರ್ಯಪುತ್ರರೆ” ಎಂಬ ಪ್ರೀತಿಯ ಸಂಬೋಧನೆಗೆ ಯೋಗ್ಯರಾಗಿದ್ದಾರೆ. ಇವರು ನನ್ನೆದೆಯಲ್ಲಿ ನಟ್ಟಂಥ ಪರಿತ್ಯಾಗದಿಂದೊದಗಿದ ನಾಚಿಕೆಯೆಂಬ ಮುಳ್ಳನ್ನು ಈವೊತ್ತು ಹೊರಗೆ ತೆಗೆದರು.

ರಾ—ಅಲ್ಲಿಯಾದರೂ ಅಶ್ರುಗಳಿಂದ ತುಂಬಿದ ಕಣ್ಣುಗಳನ್ನು ಸಮಾಧಾನ ಪಡಿಸಿಕೊಂಡೇನು.

ಸೀತೆ—ಧನ್ಯಳು ! ಆ ಹಿರಣ್ಮಯಸೀತೆಯು ಧನ್ಯಳು ! ಯಾಕಂದರೆ, ಆರ್ಯಪುತ್ರರು ಆಕೆಯನ್ನು ಬಹುಮಾನಿಸುತ್ತಾರೆ, ಹಾಗು ಅವಳು ಇವರ ಮನೋರಂಜನವನ್ನು ಮಾಡುತ್ತಾಳೆ; ಅವರ ಜೀವಕ್ಕೆ ಆಧಾರವಾಗಿದ್ದಾಳೆ.

ತಮಸೆ—( ಎಳೆನಗೆಯಿಂದ, ಸ್ನೇಹದಿಂದ, ಅಶ್ರುಗಳಿಂದ ಯುಕ್ತಳಾಗಿ )ಮಗಳೇ, ಅಂತೂ ನೀನು ಈ ರೀತಿಯಿಂದ ನಿನ್ನನ್ನು ಧನ್ಯಳೆಂದು ತಿಳಿದುಕೊಳ್ಳುತ್ತೀಯಾ?

ಸೀತೆ—( ನಾಚಿಕೆಯಿಂದ ತಲೆಬಾಗಿ ಮನದಲ್ಲಿ ) ತಾಯಿ ತಮಸಾದೇವಿಯಿಂದಲೂ, ಈವೊತ್ತು ನಾನು ನಾಚಿಸಲ್ಪಟ್ಟೆನಲ್ಲಾ !

ವಾಸಂತಿ—ನನ್ನ ದರ್ಶನದಿಂದ ರಘುನಾಥರಿಗೆ ಬಹಳ ಕಷ್ಟವಾಯಿತು; ಇನ್ನು ತಮ್ಮ ಕಾರ್ಯಕ್ಕೆ ಹಾನಿ ಬರದರೀತಿ ವರ್ತಿಸಬಹುದು.

ಸೀತೆ—ಅಯ್ಯೊ ! ಈ ಕಾಲಕ್ಕೆ ಜೀವವಗೆಳತಿಯಾದ ವಾಸಂತಿಯೂ, ಪ್ರತಿಕೂಲೆಯಾದವಳಲ್ಲ ?

ತಮಸೆ—ಮಗಳೇ, ನಡಿ ಹೋಗೋಣ.

ಸೀತೆ—ಕಷ್ಟವು ! ಈ ಕೆಲಸವು ಅತಿಕಷ್ಟವು !

ತಮಸೆ—ಹೋಗಬೇಕೆನ್ನುತ್ತೇನೆ; ಆದರೆ ಹ್ಯಾಗೆ ಹೋಗಲಿ ! ಮಗುವೇ ನಿನ್ನ ಅವಸ್ಥೆಯನ್ನು ನೋಡಿದರೆಃ—

॥ ವಸಂತತಿಲಕ ॥

ಈ ನಿನ್ನ ನಾಥನಲಿ ನಟ್ಟಿಹುದಕ್ಷಿಯುಗ್ಮಂ ।
ತಾನೀಕ್ಷಣೋತ್ಸುಕತೆಯಿಂದೆ ವಿಶಾಲದೀರ್ಘಂ ॥
ವಿನಾಶ್ಕಕೀಳಲರಿದಾಗಿಹುದಲ್ತೆ ? ಮರ್ಮ ।
ಸ್ಥಾನಗಳಂ ಕೊರೆವಯತ್ನಗಳಿಂದ ವಿಾಗಲ್ ॥ ೫೧ ॥

ಸೀತೆ—ಆರ್ಯಪುತ್ರರ ಪಾದಪದ್ಮಗಳಿಗೆ ನಮಸ್ಕಾರವು. ಇವು ನನ್ನಂಥ ಪುಣ್ಯಹೀನರ ದೃಷ್ಟಿಗೆ ಬೀಳಬಾರದೆಂದು ಅದೃಶ್ಯವಾಗುತ್ತವೆ. ( ಎಂದು ಮೂರ್ಛೆ ತಳೆಯುತ್ತಾಳೆ. )

ತಮಸೆ—ಮಗಳೇ, ಏಳು ಏಳು.

ಸೀತೆ—( ಎಚ್ಚತ್ತು ) ಮೋಡಗಳ ಮರೆಯಲ್ಲಿ ಪ್ರವೇಶಿಸುವ ಪೂರ್ಣಚಂದ್ರನ ದರ್ಶನವು ಎಷ್ಟುಕಾಲದವರಿಗೆ ಆದೀತು !

ತಮಸೆ—ಅಹಹಾ !! ಏನು ವಿಚಿತ್ರವಾದ ಘಟನೆಯಿದು !

॥ ವಸಂತತಿಲಕ ॥

ಒಬ್ಬನೇರಸಂ ಕರುಣವೆಂಬುದು ಬೇರೆಬೇರೆಂ ।
ಬಂದಾಗಳಿಂದಿಹುದು ಕಾರಣಭೇದದಿಂದ ॥

ಹೊಂದುತ್ತಿದಂಬು, ಸುಳಿ, ಗುಳ್ಳೆ, ತರಂಗವೆಂಬೀ ।
ಯಂದಂಗಳಂ ತಿಳಿಯಲೆಲ್ಲವು ನೀರೆ ಮಾತ್ರಂ || ೩೨ ||

ರಾ—ಎಲೈ ವಿಮಾನರಾಜಾ, ಇತ್ತಕಡೆಗೆ ಬರಬೇಕು.

( ಹೀಗೆ ಎಲ್ಲರೂ ಎದ್ದುನಿಲ್ಲುತ್ತಾರೆ. )

( ತಮಸಾದೇವಿಯು ಜಾನಕಿಗೆ, ವಾಸಂತೀದೇವಿಯು ರಾಮನಿಗೆ ಹೇಳುತ್ತಾರೆ. )

|| ವಸಂತತಿಲಕ ||

ಆ ದೇವಸಿಂಧುಮುಖರೀ ಜಲದೈವತಂಗಳ್ ।
ಭೂದೇವತಾಪ್ರಮುಖರೀ ಸ್ಥಳದೈವತಂಗಳ್ ॥
ವೇದಪ್ರಯೋಕ್ತೃ ಮುನಿಮುಖ್ಯನರುಂಧತೀಶಂ ।
ಮೈದೋರಿಮಾಳ್ಕೆ ಶುಭಮಂ ನಿನಗಿರ್ಕೆ ಸೌಖ್ಯಂ || ೩೩ ||

( ಹೀಗೆ ಎಲ್ಲರೂ ಹೊರಟುಹೋಗುತ್ತಾರೆ. )

( ಛಾಯಾನಾಮಕವಾದ ೩ನೇ ಅಂಕವು ಸಂಪೂರ್ಣವಾಯ್ತು. )

---

## ಉತ್ತರರಾಮಚರಿತ್ರ ನಾಟಕವು.

# ೪ನೇ ಅಂಕವು.



( ಆಬಳಿಕ ತಾಪಸರಿಬ್ಬರು ಬರುತ್ತಾರೆ. )

ಒಬ್ಬ ತಾಪಸನು—ಸೌಧಾತಕೀ ನೋಡು, ಈವೊತ್ತು ನಮ್ಮ ಗುರುಗಳಾದ ವಾಲ್ಮೀಕಿಮುನಿಗಳ ಆಶ್ರಮವು ಎಷ್ಟು ಚಂದಕಾಣುತ್ತದೆ; ಅತಿಥಿಜನರ ಸಮುದಾಯದಿಂದ ಎಲ್ಲಾಸ್ಥಳವು ತುಂಬಿಹೋಗಿದೆ; ಅವರ ಸತ್ಕಾರಕ್ಕಾಗಿ ಭೋಜನಾದಿ ಸಿದ್ಧತೆಗಳು ನಡೆದವೆ; ಪಾಕಶಾಲೆಯಲ್ಲಿಯಂತೂ ತೆರಪೇ ಇಲ್ಲಃ—

|| ಶಾರ್ದೂಲವಿಕ್ರೀಡಿತವೃತ್ತ ||

ಈವೊತ್ತೀದಕುರಂಗಿ ಪೀರ್ದುಳಿದುದಂ ಸ್ವಾದೂಷ್ಣಮಂ ಪೀರ್ವುದಾ ।
ನೀವಾರಾನ್ನದಗಂಜಿಯಂ ನಲಿವಿನಿಂದಾಮ್ರಾಶ್ರಮಸ್ಥಂ ಮೃಗಂ ॥
ತೀವಿರ್ಕುಂ ಕಲಸೋಗರಂಗಳ ಸುಗಂಧಂ ಶಾಕಪಾಕಂಗಳಂ ।
ಕೈವಾಗನ್ ಬದರೀಫಲಂಬೆರಸಿಬರ್ಕಾಮೋದಮೆತ್ತೆತ್ತಲುಂ || ೧ ||

ಸೌಧಾತಕಿ—ಹೌದೋ, ಭಾಂಡಾಯನಾ ಹೌದು ಈ ಹಣ್ಣಾದ ಗಡ್ಡ ಮೀಸೆಗಳ ವೃದ್ಧರು ಕೂಡಿರುತ್ತಾರಲ್ಲ; ಇವರೇ ನಮ್ಮ ಅನಧ್ಯಾಯಕ್ಕೆ ವಿಶೇಷವಾಗಿ ಕಾರಣವಾಗಿದ್ದಾರೆ.

ಭಾಂಡಾಯನ—( ಸಗ. ತ್ರಾ ) ಶಾಬಾಸ್! ಏನೋ ಸೌಧಾತಕೀ, ಗುರುಜನರಿಗೆ ನೀನು ಬಹಳ ಅಪೂರ್ವವಾದ ಸನ್ಮಾನವನ್ನು ಕೊಟ್ಟೆಬಿಡು !

ಸೌಧಾತಕಿ-ಭಾಂಡಾಯನಾ, ಈ ಮಹಾವೃದ್ಧಸಮುದಾಯದಲ್ಲಿ ಧುರಂಧರನಾದ ಒಬ್ಬ ದೊಡ್ಡ ಅತಿಥಿಯು ಬಂದಿರುತ್ತಾನಲ್ಲಾ ? ಆತನ ಹೆಸರೇನು ?

ಭಾಂಡಾಯನ—ಸೌಧಾತಕೀ, ಈ ನಿನ್ನ ವಿನೋದವನ್ನು ಬಿಡು ಕಂಡಿಯಾ! ಇವರು ಮಹಾನುಭಾವರಾದ ವಸಿಷ್ಠಮುನಿಗಳು; ಸಾಮಾನ್ಯರಲ್ಲ. ಋಷ್ಯಶೃಂಗರ ಆಶ್ರಮದಿಂದ ಅರುಂಧತೀಸಹಿತರಾಗಿ ಮಹಾರಾಜನಾದ ದಶರಥನ ರಾಣಿಯರನ್ನು ಕರೆದುಕೊಂಡು ಬಂದಿದ್ದಾರೆ; ತಿಳಿಯಿತೇ ? ಸುಮ್ಮನೇ ಬಡಬಡಿಸಬೇಡ.

ಸೌಧಾತಕಿ —ಹಾಗಾದರೆ, ಇವರು ವಸಿಷ್ಠಗುರುಗಳೋ ?

ಭಾಂಡಾಯನ—ಮತ್ತೆಯಾರೆಂದು ತಿಳಿದಿದ್ದೆ ನೀನು ?

ಸೌಧಾತಕಿ — ದಾರು ಬಲ್ಲರಪ್ಪಾ! ನಾನು ಇದು ದೊಡ್ಡ ತೋಳನೋ ! ಹೆಬ್ಬುಲಿಯೋ ? ಎಂದು ಆಲೋಚಿಸುತ್ತಿದ್ದೆನು.

ಭಾಂಡಾಯನ—ಆ! ಏನು ? ಏನು ಮಾತಾಡಿದಿಯೋ ಟೊಣ್ಣೀ ?

ಸೌಧಾತಕಿ—ಭಾಂಡಾಯನಾ, ಸಿಟ್ಟೆಗೇಳಬೇಡ, ನನ್ನ ಮಾತನ್ನಾದರೂ ಕೇಳು ಮುಂಚೆ, ಆತನು ಬಂದಕೂಡಲೇ ಆ ನಮ್ಮ ಬಡಪ್ರಾಣಿಯಾದ ಗೋವನ್ನು ಅಬ್ಬರದಿಂದ ಬಕ್ಕರಿಸಿ ಬಿಟ್ಟನು. ಅದೇ ನನ್ನ ಸಂಶಯಕ್ಕೆ ಕಾರಣವಾಯಿತು.

ಭಾಂಡಾಯನ—ಹಾಗಲ್ಲ ಕೇಳು, ಮಾಂಸದಿಂದ ಮಧುಪರ್ಕವನ್ನು ಮಾಡಬೇಕೆಂದು ಶಾಸ್ತ್ರವುಂಟು; ಅದರಿಂದ ಶ್ರೋತ್ರಿಯ ಬ್ರಾಹ್ಮಣರು ಅಭ್ಯಾಗತರಾಗಿ ಬಂದರೆ ಗೃಹಸ್ಥಾಶ್ರಮದವರು ತರುಣ ಗೋವನ್ನಾಗಲಿ, ಹೋರಿಯನ್ನಾಗಲಿ, ಕುರಿಯನ್ನಾಗಲಿ ಕೊಯಿದು, ಅದರ ಮಾಂಸವನ್ನು ಕೊಡುತ್ತಾರೆ. ಈ ಕೃತ್ಯವನ್ನು ಧರ್ಮಶಾಸ್ತ್ರಕಾರರು ಸನ್ಮಾನಿಸುತ್ತಾರೆ.

ಸೌಧಾತಕಿ—ಹೀಗಿದ್ದರೆ, ನೀನು ಮಾತಿನಲ್ಲಿ ಸಿಕ್ಕಿ!

ಭಾಂಡಾಯನ —ಹ್ಯಾಗೋ ಅದು?

ಸೌಧಾತಕಿ—ಈಗ ಆಶ್ರಮಕ್ಕೆ ಬಂದ ವಶಿಷ್ಠ ಮುಂತಾದವರಿಗೋಸ್ಕರ ಗೋವಧವಾಯಿತು; ಆದರೆ ಈವೊತ್ತೇ ರಾಜರ್ಷಿಯಾದ ಜನಕನು ಬಂದಿದ್ದನಲ್ಲಾ? ಆತನಿಗಾಗಿ ನಮ್ಮ ಗುರುಗಳು ಮೊಸರು ಜೇನತುಪ್ಪಗಳಿಂದಲೇ ಮಧುಪರ್ಕವಿಧಾನವನ್ನು ತೀರಿಸಿಬಿಟ್ಟರು?

ಭಾಂಡಾಯನ—ಮಾಂಸಾಹಾರವನ್ನು ಬಿಟ್ಟವರಿಗೆ ಮಾಡುವ ಮಧುಪರ್ಕವು ಬೇರೆ, ಬಿಡದವರಿಗೆ ಮಾಡುವದು ಬೇರೆ, ರಾಜರ್ಷಿ ಜನಕನು ಪೂರ್ವಪಕ್ಷದವನು.

ಸೌಧಾತಕಿ—ಯಾವ ಕಾರಣದಿಂದ?

ಭಾಂಡಾಯನ—ತನ್ನ ಮಗಳು ಸೀತಾದೇವಿಗೆ ದೈವದಿಂದ ಅಂಥಾ ದಾರುಣವಾದ ದುರ್ದಶೆ ಬಂದದ್ದನ್ನು ಕೇಳಿದ ಕೂಡಲೇ ವನವಾಸಿಯಾಗಿ ಮಾಂಸಾಶನವನ್ನು ಬಿಟ್ಟನು; ಹಾಗೆ ಅವನು ಚಂದ್ರದ್ವೀಪ ತಪೋವನದಲ್ಲಿ ತಪಸ್ಸುಮಾಡುತ್ತ ಇರಹತ್ತಿ ಎಷ್ಟೋ ವರ್ಷಗಳಾಗಿ ಹೋದವು.

ಸೌಧಾತಕಿ—ಹೀಗಿದ್ದರೆ, ಈಗ ಇಲ್ಲಿಗೆ ಬರುವ ಕಾರಣವೇನು?

ಭಾಂಡಾಯನ—ಪುರಾತನಪ್ರಿಯಮಿತ್ರನಾದ ವಾಲ್ಮೀಕಿಯನ್ನು ನೋಡಬೇಕೆಂಬದೇ.

ಸೌಧಾತಕಿ—ಈ ರಾಜರ್ಷಿಗೆ ಕೌಸಲ್ಯೆ ಮುಂತಾದವರ ಸಂದರ್ಶನವಾಯಿತೋ, ಇಲ್ಲೋ?

ಭಾಂಡಾಯನ— ಇದೇಈಗ ಭಗವಾನ್ ವಶಿಷ್ಠಗುರುಗಳು ನೀನೇ ಹೋಗಿ, ಜನಕರಾಜನಿಗೆ ಭೆಟ್ಟಿಯಾಗೆಂದು ಹೇಳುವದಕ್ಕೆ ಅರುಂಧತೀದೇವಿಯನ್ನು ಕೌಸಲ್ಯೆಯ ಬಳಿಗೆ ಕಳುಹಿದ್ದಾರೆ.

ಸೌಧಾತಕಿ— ಹಾಗಾದರೆ ನಡಿ, ಈ ವೃದ್ಧರೆಲ್ಲಾ ಅನ್ಯೋನ್ಯವಾಗಿ ಕೂಡಿ ಮಾತುಕಥೆಗಳನ್ನಾಡುವಂತೆ ನಾವೂ ನಮ್ಮ ಗೆಳೆಯರೆಲ್ಲರನ್ನು ಕೂಡಿ ವಿನೋದಿಸುತ್ತಾ ಅನಧ್ಯಯನದ ಕಾಲವನ್ನು ಸಂತೋಷದಿಂದ ಕಳೆಯೋಣ- (ಹೀಗೆಂದು ಮುಂದಕ್ಕೆ ಹೋಗುತ್ತಾರೆ.)

ಭಾಂಡಾಯನ—ಇಗೋ ನೋಡು, ಪುರಾತನ ಬ್ರಹ್ಮವಾದಿಯಾದ ರಾಜರ್ಷಿ ಜನಕನು ವಾಲ್ಮೀಕಿವಶಿಷ್ಠರ ದರ್ಶನವನ್ನು ತಕ್ಕೊಂಡು, ಈಗ ಆಶ್ರಮದ ಹೊರಗಿರುವ ವೃಕ್ಷದ ಕೆಳಗೆ ಕೂತಿದ್ದಾನೆ.

॥ ಆರ್ಯಾವೃತ್ತ ॥

ಎದೆಯಲ್ಲಿಹ ಮಗಳಳಲಿಂ ।
ಕುದಿವಂ ಜನಕಂ ನಿರಂತರಂ ತನ್ನೊಳ್ ॥
ಪುದುಗಿದ ವೈಶ್ವಾನರನಿಂ ।
ದೆ, ದಹಿಸುತಿರ್ಪಂದದಿಂ ವನಸ್ಪತಿಯು ॥ ೨ ॥

( ಹೀಗೆ ಅವರಿಬ್ಬರು ಹೊರಟು ಹೋಗುತ್ತಾರೆ. )

( ಆ ಬಳಿಕ ಜನಕರಾಜನು ಬರುತ್ತಾನೆ. )

ಜನಕನು—ಹಾ ! ವಿಧಿಯೇ !

॥ ಮತ್ತೇಭವಿಕ್ರೀಡಿತಂ ॥

ಎದೆಯಂ ಸೀಳ್ವುದು, ನೋವನೀವುದತಿತೀಕ್ಷ್ಣಂ ಭಾರಿಯಾಪತ್ತುಬಂ ।
ದುದು ತನ್ನಾಪುಕುವರಿಗೆಂದು ಕಡುಶೋಕಂ ಪುಟ್ಟಿದತ್ತೆನ್ನೊಳು ॥
ಇದಜಸ್ರಂ ಕರಪತ್ರದಂತೆ ಕೊರೆಗುಂ ಮರ್ಮಂಗಳಂ ಶಾಂತವಾ ।
ಗದಿದಿನ್ನುಂಪೊಸತಾಗಿ ತೋರ್ಪುದಿದಕಾಯ್ತೊರಾರುಸಂವತ್ಸರಂ ॥ ೩ ॥

ಕಷ್ಟವು! ಅತಿಕಷ್ಟವು! ಹೀಗೆ ಮುಪ್ಪಿನಿಂದಲೂ, ಅಸಹ್ಯವಾದ ದುಃಖದಿಂದಲೂ, ಬಹಳವಾದ ಉಪವಾಸಾದಿ ವ್ರತನಿಯಮಗಳಿಂದಲೂ, ರಸರಕ್ತಾದಿ ಧಾತುಗಳು ಒಣಗಿ, ಅನುಪಯುಕ್ತವಾದರೂ ನನ್ನ ಈ ಸುಟ್ಟ ಶರೀರವು ಬಿದ್ದುಹೋಗವಲ್ಲದಲ್ಲಾ ? ಏನುಮಾಡಲಿ ? ಆತ್ಮಘಾತವನ್ನಾದರೂ ಮಾಡಿಕೊಳ್ಳಬೇಕೆಂದರೆ—ಅಂಥವರಿಗೆ ಸೂರ್ಯದರ್ಶನವಿಲ್ಲದ ಅಂಧತಾಮಿಸ್ರಲೋಕವು ಪ್ರಾಪ್ತವಾಗುತ್ತದೆ ಎಂದು ಮುನಿಗಳು ಹೇಳುತ್ತಾರೆ. ಅನೇಕ ಸಂವತ್ಸರಗಳು ಕಳೆದುಹೋಗಿದ್ದರೂ, ಪ್ರತಿಕ್ಷಣದಲ್ಲೂ ಸ್ಮರಣವಾಗಿ ಹೊಸಪರಿಯಿಂದ ಬೆಳೆದು, ದಾರುಣವಾಗಿರುವ ಈ ನನ್ನ ದುಃಖದ ವೇಗವು ಶಾಂತವಾಗುವದೇ ಇಲ್ಲ. ಎಲೌ ತಾಯಿಯೇ, ದೇವಯಜನಸಂಭವೇ ದೇವೀ ಸೀತೇ, ನೀನು ಹುಟ್ಟಿ ಇಂಥಾ ದುರ್ದೆಶೆಯನ್ನು ಅನುಭವಿಸಬೇಕಾಯಿತೇ ? ಇದರಿಂದ ನನಗೆ ಬಹಳ ನಾಚಿಕೆಯುಂಟಾಗಿದೆ! ಸ್ವಚ್ಛಂದವಾಗಿ ಅಳುವದಕ್ಕೂ ಬಾರದ ಹಾಗೆ ಆಗಿರುತ್ತದೆ. ಹಾ! ಮಗಳೇ!

॥ ವಸಂತತಿಲಕ ॥

ಒಂದೊಂದೆ ರಾಜಿಸುತಿರಲ್ಕೆಳೆಮೊಗ್ಗೆವಲ್ಲಳ್ ।
ನಂದಸ್ಮಿತಂ ರುದಿತಮುಣ್ಮಿರೆ ನಿರ್ನಿಮಿತ್ತಂ ॥

ಮುಂದಪ್ರಸಂಗದ ತೊದಲ್ನುಡಿ, ಮುದ್ದುವೆರ್ಸಾ
ಕಂದಮ್ಮ ! ಕಟ್ಟಿಹುದೆ ಕಣ್ಣೆ ತಮಾನನಾಬ್ಜಂ ॥ ೪ ॥

ಎಲೌ ಭಗವತೀ ಭೂದೇವಿ, ನೀನು ಅತಿ ನಿಶ್ಚಲಳೆಂಬದು ಸತ್ಯವು:

॥ ಶಾರ್ದೂಲವಿಕ್ರೀಡಿತವೃತ್ತಂ ॥

ನೀನಾ ವಹ್ನಿ, ವಶಿಷ್ಠಪತ್ನಿ, ಮುನಿಮುಖ್ಯರ್, ಗುಣೆಯುಂ ಬಲ್ಲವರ್ ।
ಭಾನು ಶ್ರೀರಘುವಂಶಮುಖ್ಯನರಿವಂ ತಾನೇ ಸ್ನುಷಾಶೀಲಮಂ ॥
ನೀನಾವಾಕೆಯಪೆತ್ತೆ ವಾಣಿ ಪಡೆವೊಲ್ ಸದ್ವಿದ್ಯೆಯುಂ, ತಾಳ್ದಿಪೇಳ್ ।
ಏನೆಂದಗ್ನಿ ವಿಶುದ್ಧೆಗಾವುಗಳಿಗಾದಾದುಃಖಮಂ ? ನಿಷ್ಠುರೀ! ॥ ೫ ॥

( ಇಷ್ಟರಲ್ಲಿ ಹಿಂದೆ ಶಬ್ದವಾಗುತ್ತದೆ )

ಎಲೌ ಭಗವತಿಯರಿರಾ, ಮಹಾದೇವಿಯರಿರಾ, ಇತ್ತಕಡೆಗೆ ಬರಬೇಕು.

ಜನಕನು—( ನೋಡುತಾ ) ಕಂಚುಕಿಯಿಂದ ತೋರಿಸಲ್ಪಟ್ಟ ಹಾದಿಯಿಂದ ಬರುವವಳಾರು? ಓಹೋ, ವಶಿಷ್ಠನ ಪತ್ನಿ .ಅರುಂಧತಿಯು, ( ಎದ್ದು ನಿಲ್ಲುತ್ತಾನೆ ) ಮಹಾದೇವಿಯರಿರಾ, ಎಂದು ಅಂದನಲ್ಲಾ? ಅವರು ಯಾರು ? ಮಹಾರಾಜ ದಶರಥನ ಧರ್ಮಪತ್ನಿಯು; ನಮ್ಮ ಪ್ರಿಯಸಖಿಯಾದ ಕೌಸಲ್ಯೆಯು ?

॥ ವಸಂತತಿಲಕ ॥

ಶ್ರೀದೇವಿವೊಲ್ ದಶರಥಾಲಯಕಿರ್ದಳೀಕೆ ।
ಸಾದೃಶ್ಯವೇಕೆ ಸಿರಿಯೀ ಎನಲಾಗದೇನ್ನೆ ॥
ಹಾ ! ದೈವದಿಂದೆ ಪೆರತೊಂದು ವಿಕಾರವನ್ನೇ
ಐದಿರ್ದಪಳ್ ಪೊಸತು! ಭಾಗ್ಯದಶಾವಿಪಾಕಂ॥ ॥ ೬ ॥

ಎಲಎಲಾ ! ! ದೈವಯೋಗದಿಂದ ಈಕೆಗೆ. ಬೇರೊಂದು ವಿಕಾರಾವಸ್ಥೆಯೇ ಪ್ರಾಪ್ತವಾಗಿರುತ್ತದೆ,

॥ ವಸಂತತಿಲಕ ॥

ಎನ್ನಕ್ಷಿಗಾವಳು ಮಹೋತ್ಸವಮೂರ್ತಿಯಂತೆ ।
ಮುನ್ನಿರ್ದಳಾಸಖಿಯದರ್ಶನವೀಗಸಹ್ಯಂ ।
ಎನ್ನೀಮನಕ್ಕಿಗಹುದ್ಕೆ ಕ್ಷತಕುಪ್ಪಿನಂತೆ ।
ಪೊನ್ನಿಲ್ಲದಂಗೆರೆವನಂತಿದು ಕಷ್ಟಮೈಯ್ಯೋ ॥ ೭ ॥

ಅರು—ಶಿವಾ ಕೌಸಲ್ಯೇ, ನಾನು ಹೇಳುವದನ್ನು ಕೇಳು. ನೀನೇ ಹೋಗಿ ಜನಕರಾಜನ ದರ್ಶನವನ್ನು ತಕ್ಕೊಳ್ಳಬೇಕೆಂದು ನಿಮ್ಮ ಕುಲಗುರುಗಳ ಅಪ್ಪಣೆಯಾಗಿದೆ. ಆದಕ್ಕೇ ನಾನು ನಿನ್ನ ಕಡೆಗೆ ಬಂದಿರುತ್ತೇನೆ, ನಡಿ, ಇನ್ನು ಮೇಲಿಂದಮೇಲೆ ಎಷ್ಟಂತ ಖೇದಪಡುತ್ತೀ ?

ಕಂಚುಕಿ—ತಾಯಿ, ತಾವು ಮನಸನ್ನು ಗಟ್ಟಿಮಾಡಿ, ಮಹಾತ್ಮರಾದ ವಶಿಷ್ಠರ ಅಪ್ಪಣೆಯನ್ನು ಪಾಲಿಸಬೇಕೆಂದು ನಿಮ್ಮ ಅಡಿಯ ಸೇವಕನಾದ ನನ್ನ ಪ್ರಾರ್ಥನೆಯದೆ.

ಕೌಸಲ್ಯೆ—ಹಾ! ವಿಧಿಯೇ! ಇಂಥಾ ಹೊತ್ತಿನಲ್ಲಿ ಮಿಥಿಲಾನಾಥನನ್ನು ಕಾಣಬೇಕಾಯಿತೇ? ಎಲ್ಲಾ ದುಃಖಗಳೂ ಒಮ್ಮಿಂದೊಮ್ಮೆ ಬರುತ್ತವಲ್ಲಾ ! ನನ್ನ ಹೃದಯವು ಧೈರ್ಯವನ್ನು ಬಿಟ್ಟು ಹಾರುತ್ತದೆ; ಅವನ್ನು ನಿಲ್ಲಿಸಲಿಕ್ಕೆ ನನಗೆ ಶಕ್ತಿಯಿಲ್ಲ.

ಅರುಂಧತಿ—ಹೌದು, ತಾಯಿ, ಈ ಮಾತಿನಲ್ಲಿ ಸಂಶಯವೇನು ?

॥ ಕಂದ ॥

ಅಕ್ಕುಂ ಪ್ರಿಯರನಗಲ್ದೊಡೆ ।
ದುಃಖಂ ತತ್ಕಾಲಕಾಪ್ತರಂ ಕಾಣ್ಬುದುಮಾ ॥
ದುಃಖಂ ದುಸ್ಸಹವಪ್ಪುದು ।
ದುಃಖೋರ್ಮಿದುನೂರ್ಮೆನಲ್ಗಿದದುಪರಿಗುಂ ॥ ೮ ॥

ಕೌಸಲ್ಯೆ—ನನ್ನ ಮಗಳಾದ ಜಾನಕಿಗೆ ಇಂಥಾ ದುರ್ದಶೆಯು ಬಂದಿರಲಾಗಿ, ರಾಜರ್ಷಿ ಜನಕನಿಗೆ ನನ್ನ ಮುಖವನ್ನು ಹ್ಯಾಗೆ ತೋರಿಸಲಿ? ಮತ್ತು ಯಾವ ಮಾತುಗಳನ್ನಾಡಲಿ? ಜಾನಕಿಯನ್ನು ಕೇಳಿದರೆ ಏನು ಹೇಳಲಿ?

ಅರು—( ಕೌಸಲ್ಯೆಯನ್ನು ಸಮಾಧಾನಪಡಿಸಿ ) ನೋಡು:

॥ ಆರ್ಯಾವೃತ್ತ ॥

ಈತಂ ನಿಮಿಯನ್ವಯದಿ ।
ಖ್ಯಾತಂ ಶ್ಲಾಘ್ಯಾನುಬಂಧಿ ನಿಷ್ಣಾತಂ ॥
ಈತಂಗಾ ವೇದಾಂತದ ।
ದಾತಾರಂ ಯಾಜ್ಞವಲ್ಕ್ಯಮುನಿನಾಥಂ ॥ ೯ ॥

ಕೌಸಲ್ಯೆ— ( ಕಣ್ಣೊರೆಸಿ ) ಈತನೇ ನಮ್ಮ ಮಹಾರಾಜರ ಹೃದಯಾನಂದವು, ನಮ್ಮ ಸೀತೆಯ ತಂದೆಯು; ರಾಜರ್ಷಿ ಜನಕನು. ಹಾ ! ದೈವವೇ !

ಅಂದಿನ ವಿವಾಹಸಮಾರಂಭದಲ್ಲಿ ಈ ರಾಜನು ಮಾಡಿದ ಸತ್ಕಾರಕ್ಕೆ ಜೋಡಿಲ್ಲ. ಈಗ ಅದೆಲ್ಲಾ ಕನಸಿನ ಸೌಖ್ಯವಾಯಿತಲ್ಲವೇ ?

ಜನಕನು—( ಹತ್ತರಕ್ಕೆ ಬಂದು ) ತಾಯಿ! ಅರುಂಧತಿಯೇ ಈ ಶೀರಧ್ವಜನೆನಿಸುವ ಜನಕನು ನಿಮಗೆ ಅಭಿವಂದಿಸುತ್ತಾನೆ.

॥ ವಸಂತತಿಲಕ ॥

ತಾನೇ ಪುರಾತನರಿಗಾರ್ಯರಿಗಂ ವರಿಷ್ಠಂ ।
ತಾನೇ ಪವಿತ್ರತರಕೀಜಕೆಯುಂ ನಿಧಾನಂ ॥
ಆ ನಿನ್ನ ಜೀವದೊಡೆಯಂ ಮುನಿಪಂ ವಶಿಷ್ಠಂ ।
ತಾನಾವಳಿಂದೆ ಶುಚಿಯೆಂಬನು ತನ್ನನೇದುಂ ॥ ೧೧ ॥

ಆ ದೇವಿಯುಂ ಭುವನಮಾನ್ಯೆಯು ನಿಂನನಾಸಂ ।
ಧ್ಯಾದೇವಿಯುಂ ನಮಿಸುತಂತೆ ಪ್ರಭಾತದಲ್ಲಿ ॥
ಶ್ರೀಧಾರುಣೀತಲವಿಲೋಲಶಿರಸ್ಕನಾಗಿ ।
ವೈದೇಹನಾಂ ಭುವನಮಂಗಳೆ ವಂದಿಸಿಪೆಂ ॥ ೧೧ ॥

ಅರುಂಧತಿ —ಎಲೈ ಅರಸೇ ! ನಿನಗೆ ಪರಂಜ್ಯೋತಿಃ ಸ್ವರೂಪವಾದ ಬ್ರಹ್ಮನು ಪ್ರತ್ಯಕ್ಷವಾಗಲಿ, ಅಂತರಿಕ್ಷದಲ್ಲಿ ಹೋಗುತ್ತಿರುವ ಸತ್ವಮಯನಾದ ಈ ಸೂರ್ಯನಾರಾಯಣನು ನಿನ್ನನ್ನು ಶುದ್ಧಿಗೊಳಿಸಲಿ.

ಜನಕ—ಎಲೈ ಕಂಚುಕಿಯೇ, ಪ್ರಜಾಪಾಲಕನ ತಾಯಿಯಾದ ಈ ನಿಮ್ಮ ಕೌಸಲ್ಯಾದೇವಿಯು ಕ್ಷೇಮದಿಂದಿದ್ದಾಳಷ್ಟೇ ?

ಕಂಚುಕಿ—ದೊರೆಗಳೇ "ಪ್ರಜಾಪಾಲಕನ ತಾಯಿ" ಎಂಬ ಈ ವಿಶೇಷಣ ಪದದಿಂದ ನಾವು ತಮ್ಮಿಂದ ಅತಿ ನಿಷ್ಠುರವಾಗಿ ಧಿಕ್ಕರಿಸಲ್ಪಟ್ಟೆವು. ರಾಜಋಷಿಯೇ ಕೇಳು; ಇದೇ ಸಿಟ್ಟಿನಿಂದ ರಾಮಚಂದ್ರನ ಮುಖಾವಲೋಕನವನ್ನು ಬಿಟ್ಟು ಇನ್ನೂ ಬಹಳ ದಿವಸಗಳಾಗಿಲ್ಲ, ಇಂಥ ಅತಿ ದುಃಖಿಷ್ಠೆಯಾದ ದೇವಿಯನ್ನು ತಾವು ಮತ್ತೂ ದುಃಖಪಡಿಸುವದು ಯುಕ್ತವಲ್ಲ. ರಾಮಭದ್ರನಿಗೆ ದೋಷವಿಡಬೇಕಂದರೆ—ಜನರು ಬಹುನೀಚರು; ನಾಲ್ಕೂ ಕಡೆಗೆ ಅತಿ ಅಸಹ್ಯವಾದ ದುರ್ವಾರ್ತೆಯನ್ನು ಹುಟ್ಟಿಸಿದ್ದಾರೆ; ಅಗ್ನಿಶುದ್ಧಿಯನ್ನು ಕೂಡ ಸುಳ್ಳೇಯೆಂದು ತಿಳಿಯುತ್ತಾರೆ. ಆದುದರಿಂದ ಇಂಥಾ ಘೋರಕೃತ್ಯವು ಆತನಿಂದಾಯಿತು, ಉಪಾಯವಿಲ್ಲ- ಇದು ಸೀತಾದೇವಿಯ ದುರ್ದೈವವು.

ಜನಕ—ಏನು? ನನ್ನ ಅಂಕುರವನ್ನು ಶುದ್ಧಮಾಡಲಿಕ್ಕೆ ಅಗ್ನಿಯೆಂಬಾತನು ಎಷ್ಟರವನು? ಅಯ್ಯೋ! ಕಷ್ಟವು! ರಾಮನಿಂದ ನಾವು ಒಮ್ಮೆ ತಿರಸ್ಕರಿಸಲ್ಪಟ್ಟಿದ್ದೇವೆ; ಆದರೂ ಹೀಗೆ ಮಾತಾಡುವ ಜನರಿಂದ ಮತ್ತೂ ಮತ್ತೂ ಅವಮಾನಿತರಾಗುತ್ತೇವಲ್ಲ!

ಅರುಂಧತಿ—ಹೌದು! ಅಗ್ನಿಯು ಮಗಳನ್ನು ಶುದ್ಧಮಾಡಿದನೆಂಬದು ಅಯುಕ್ತವಾಗುತ್ತದೆ; ಸೀತೆಯೇ ಅಗ್ನಿಯನ್ನು ಶುದ್ಧಮಾಡಿದಳೆಂಬದು ವಿಹಿತವು. ಹಾ! ಕಂದಮ್ಮಾ,

॥ ಶಿಖರಿಣೀವೃತ್ತ ॥

ಮಗಳ್ ಶಿಷ್ಯಳ್ ನೀನೆಂಬುದು ತನಗದಂತಿರ್ಕೆ ಸತಿನಿಂ ।
ಸಬಾಧಂ ಶುದ್ಧತ್ವಂ ಭಕುತಿಯುಂ ನೆ ನಿಂನೊಳ್ ಬೆಳಿಸುಗುಂ ॥
ಜಗದ್ವಂದ್ಯಳ್ ನೀನೌ, ಮಗುವೆನಿಸು, ಪೆಂಣಾಗದರೊಳೇ ।
ನಗಣ್ಯಂ ಲಿಂಗಂ ಮೇಣ್ ವಯವು ಗುಣಿಯೊಳ್ ಪೂಜ್ಯವು ಗುಣಂ ॥ ೧೨ ॥

ಕೌಸಲ್ಯೆ— ಶಿವಯ್ಯಾ! ಇದೇನು? ನನ್ನ ಮೈಗೆಲ್ಲಾ ವ್ಯಥೆಯಾಗುತ್ತದೆ.
(ಎಂದು ಮೈಮರೆಯುತ್ತಾಳೆ.)

ಜನಕ— ಅಯ್ಯೋ! ವಿಧಿಯೇ! ಇದೇನಾಯಿತು ?

ಅರುಂಧತಿ— ರಾಜಋಷಿಯೇ! ಮತ್ತೇನಾಗತಕ್ಕದ್ದದೆ?

॥ ವಿಬುಧಪ್ರಿಯಾವೃತ್ತಂ ॥

ಆ ನರೇಶ್ವರನಾಸ್ನುಷಾಮಣಿಯಾದಿನಂಗಳುಮಾಸುಖಂ ।
ಧ್ಯಾನಗೋಚರಮಾಯ್ತು ಕಂಗೊಳಿಸಲ್ಕೆ ನೀಂ ಪ್ರಿಯಬಾಂಧವಂ ॥
ದೀನೆಯೀಬಹುಘೋರದುರ್ದಶೆಯಿಂ ಭವತ್ಸಖಿ ಮೂರ್ಛಿತೆ ।
ಮಾನಸಂ ಮೃದು ಪುಷ್ಪದಂತೆ ಕುಲಾಂಗನಾಜನಕ್ಕಿದು ॥ ೧೩ ॥

ಜನಕ— ಓಹೋ ! ಬಹಳ ಅನರ್ಥವಾಯಿತು ! ನಾನು ಎಲ್ಲಬಗೆಯಿಂದಲೂ ಘಾತಕನಿದ್ದೇನೆ. ನನ್ನ ಪ್ರಾಣಮಿತ್ರನ ಪ್ರಿಯಪತ್ನಿಯನ್ನು ಕೂಡ ಸ್ನೇಹದಿಂದ ನೋಡಲಿಲ್ಲ:—

॥ ಮತ್ತೇಭವಿಕ್ರೀಡಿತಂ ॥

ಅವನೆನ್ನುತ್ತಮಬಾಂಧವಂ, ಹೃದಂತವಾತಂ, ಮತ್ಪ್ರಿಯಸ್ನೇಹಿ, ಮೇ।
ಣವನೇ ಹರ್ಷದ ಮೂರ್ತಿ ಕಂಗಳಿಗವಂ ಮಜ್ಜೀವಿತಕ್ಕಾಸ್ಪದಂ ॥

ಅವನೇ ಮಿತ್ರನು, ಜೀವನು, ಪ್ರಿಯತಮು ಪ್ರಾಣಾದಿ ಸರ್ವಸ್ವದು; ॥
ನನಗೇನಾಗಿರದಿರ್ದನ್ಕೆ? ದಶರಥ ಶ್ರೀಮನ್ಮಹಾರಾಜನು ॥ ೧೩ ॥

ಕಷ್ಟವು! ಅವಳೇ ಈ ಕೌಸಲ್ಯೆಯಲ್ಲವೇ ?

॥ ಮತ್ತೇಭವಿಕ್ರೀಡಿತಂ ॥

ಪ್ರಣಯಕ್ರೋಧಗಳಿಂ ರಹಸ್ಯದೊಳಗೋರ್ವರ್ಗೋರ್ವರೋರೋರ್ಮೆ ದೂ
ಷಣೆಯಿಟ್ಟಾ ಛಲದಿಂದೆ ನಿಂದಿಸಿದರೆಕ್ಕನ್ನೀವಧೂವಲ್ಲಭರ್ ॥
ಸೊಸೆ ಪೆರ್ಚಿಸಲಿಕ್ಕೊಡುಬಸಿರಲಿಕ್ಕಲ್ಲಿದೆ ನನ್ನಿಚ್ಛೆಯಿಂ ।
ಎಣಿಸಲ್ಕಾಬಿನದಾಗಳಂ ದಹಿಸುಗುಂ ಶೋಕಾಗ್ನಿಯಿಂದೀಗಿದೆ ॥ ೧೪ ॥

ಅರುಂಧತಿ— ಅಯ್ಯೋ ! ಎಂಥಾ ಕಷ್ಟವಿದು ? ಬಹಳ ಹೊತ್ತು ಉಸುರು ಕಟ್ಟಿದ್ದರಿಂದ ಈ ನಮ್ಮ ಸಖಿಯ ಹೃದಯವು ಎಷ್ಟು ಕಠಿಣವಾಗಿದೆ.

ಜನಕ— ಹಾ! ಪ್ರಿಯಸಖಿಯೇ; ( ಎಂದು ಕಮುಂತಲೂದಕವನ್ನು ಚಿಮುಕಿಸುತ್ತಾನೆ. )

ಕಂಚುಕಿ—

॥ ವಸಂತತಿಲಕಂ ॥

ಸನ್ಮೋದನೀಯುವನುಕೂಲತೆಯನ್ನು ಬೀರಿ ।
ತಾಂ ಮಿತ್ರನೊಲ್ ಮೊದಲಿದೇ ಸ್ಥಿರನೊಂದು ತೋರಿ ॥
ಬಮ್ಮಿಂದರೊನ್ಮ ವಿಪರೀತವಿಪತ್ತಿಯು ತ ।
ರ್ಪಂ ಮತ್ತಿಯುಂ ವಿಧಿ ಮನೋವ್ಯಥೆಗೆಯ್ವನುಗ್ರಂ ॥ ೧೬ ॥

ಕೌಸಲ್ಯೆ— ( ಎಚ್ಚತ್ತು ) ಎಲೇ ಮಗಳೇ ಜಾನಕಿ! ಎಲ್ಲಿ ಹೋದೆ? ವಿವಾಹಶೋಭೆಯಿಂದ ಅಲಂಕೃತವಾದಂಥ, ಹೊರಸೂಸುವ ಮುಗುಳುನಗೆಯಿಂದ ಚಲ್ವಾದಂಥ, ನಿನ್ನ ಮೊಗದಾವರೆಯನ್ನು ನೆನೆಯುತ್ತೇನೆ. ಮಗಳೇ, ಶರತ್ಕಾಲದ ಬೆಳದಿಂಗಳಂತೆ ರಮಣೀಯವಾದ ನಿನ್ನ ಅಂಗಗಳಿಂದ ನನ್ನನ್ನು ಆನಂದಪಡಿಸು. ಇನ್ನೊಮ್ಮೆ ನನ್ನ ತೊಡೆಯನ್ನು ಶೃಂಗರಿಸು! ನಮ್ಮ ಮಹಾರಾಜರು ನಿನ್ನನ್ನು ನೋಡಿ ಈ ಸೀತೆಯು ರಘುಕುಲಸಾರ್ವಭೌಮರ ಸೊಸೆಯಾದದ್ದು ಸರಿಯೇ, ಆದರೂ ಜನಕಮಹಾರಾಜನ ಮಗಳಾದವಳ್ದರಿಂದ ನಮಗೂ ಮಗಳೇ ಸರಿ ಎಂದು ದಿನಾಲು ಆನಂದಪಡುತ್ತಿದ್ದರು.

ಕಂಚುಕಿ— ಮಹಾದೇವಿಯವರು ಆಡಿದ್ದು ಯಥಾರ್ಥವು.

॥ ವಂಶಸ್ಥವೃತ್ತ ।

ಅತಿಪ್ರಿಯಂ ಮಕ್ಕಳೊಳಯ್ಪರಲ್ಲಿರಾಯಂ ।
ಕ್ಷಿತೀಶ್ವರಂಗಿರ್ದನು ರಾಕ್ಷಸಾಂತಕಂ ॥
ಅತಿಪ್ರಿಯಳ್ ಸೀತೆ ವಧೂಚತುಷ್ಕದಿ ।
ಪ್ರತೀತೆ ತತ್ಪ್ರೀತಿಯಪುತ್ರಿ ಶಾಂತಿವೊಲ್ ॥ ೧೭ ॥

ಜನಕ— ಹಾ ಮಹಾರಾಜಾ ದಶರಥನೇ ! ಹೀಗೆ ನೀನು ಎಲ್ಲಾ ರೀತಿಯಿಂದ ನನಗೆ ಅತಿಪ್ರಿಯನಾಗಿದ್ದಿ, ಹ್ಯಾಗೆ ನಿನ್ನನ್ನು ಮರೆಯಲಿ ?

॥ ಶಾರ್ದೂಲವಿಕ್ರೀಡಿತವೃತ್ತ ॥

ಜಾಮಾತ್ರಾಪ್ತಜನರ್ಕಳಂ ಭಜಿಸುವರ್ ಕನ್ಯಾಪಿತೃಜ್ಞಾತಿಗಳ್ ।
ನೇಮಂ ವ್ಯತ್ಯಯಮವಹುತ್ತುದಾ ಮದುವೆಯೊಳ್ನೀನೆನ್ನನಾರಾಧಿಸಿ ॥
ಹಾ! ಮೃತ್ಯು, ಪ್ರಿಯ ನಿನ್ನ ನುಂಗಿತಡಗಿತ್ತಾ ಮೂಲಸಂಬಂಧವಿಂ ।
ನೀ ಮಜ್ಜೀವಿತಮಂ ಸುಡೇಕುಳಿದುದೀ ಯುಗ್ರವ್ಯಥಾಭೋಗಕೆ ॥ ೧೮ ॥

ಕೌಸಲ್ಯೆ— ಮಗಳೇ ಜಾನಕೀ, ದೃಢವಾದ ವಜ್ರಲೇಪನದಿಂದ ಘಟಿತವಾದಂತೆ ನಿಶ್ಚಲವಾಗಿರುವ ಈ ನನ್ನ ಪ್ರಾಣವು ದುರ್ಭಾಗ್ಯಳನ್ನು ಬಿಟ್ಟು ಹೋಗವೊಲ್ಲದು; ಏನುಮಾಡಲಿ ?

ಅರುಂಧತಿ— ಅರಸುಮಗಳೇ ಕೇಳು, ಸಮಾಧಾನವನ್ನು ತಾಳು, ಕಣ್ಣೀರುಗಳನ್ನು ಒರಿಸು ನಿಮ್ಮ ಕುಲಗುರುಗಳು ಋಷ್ಯಶೃಂಗರಾಶ್ರಮದಲ್ಲಿ ಏನು ಹೇಳಿದರು ಗೊತ್ತಿಲ್ಲವೇ ? ಆಗತಕ್ಕದ್ದಾಗಿಹೋಯಿತು; ಆದಾಗ್ಯೂ ಮುಂದೆ ಕಲ್ಯಾಣವಾದೀತೆಂದು.

ಕೌಸಲ್ಯೆ— ಎಲೌ ಮಹಾನುಭಾವಳೇ, ನನ್ನ ಮನೋರಥವೆಲ್ಲ ಹಾಳಾಯಿತೆಂಬಂತೆ ತೋರುತ್ತದೆ.

ಅರುಂಧತಿ— ಏನು ? ರಾಜಪುತ್ರೀ, ಅದು ಸಟಿಯೆಂದು ತಿಳಿಯುತ್ತೀಯಾ? ಎಲೌ ಕ್ಷತ್ರಿಯೋತ್ತಮಳೇ, ಹೀಗನ್ನಬೇಡ. ಆ ಮಾತು ಸತ್ಯವೆಂದು ತಿಳಿದಿರುಃ—

॥ ವಸಂತತಿಲಕಂ ॥

ಅಲ್ಲೆಂಟೆ ಸಂಶಯಪದಂ ? ಪರಮೋಮವಂನೇ ।
ಬಲ್ಲಾದ್ವಿಜಪ್ರವರರಾಡಿದ ಸೊಲ್ಲಗಳಲ್ಲಿ ॥

ಕಲ್ಯಾಣಲಕ್ಷ್ಮಿಗವರುಕ್ತಿಗಳಾಶ್ರಯಂ ಕೌ ।
ಸಲ್ಯೇ ! ವೃಷೋಕ್ತಿಗಳನಾದರವರ್ಪುರಂಧ್ರೀ: ॥ ೧೯ ॥

( ಇಷ್ಟರಲ್ಲಿ ಹಿಂದೆ ಶಬ್ದವಾಗುತ್ತಿರುವ ಎಲ್ಲರೂ ಕಿವಿಗೊಟ್ಟು ಕೇಳುತ್ತಾರೆ )

ಜನಕ—ಇದು-ವಶಿಷ್ಠಾದಿಗಳು ಆಶ್ರಮಕ್ಕೆ ಬಂದುದರಿಂದ ಅನಧ್ಯಾಯವಾದಕಾರಣ ಅತ್ಯಾನಂದದಿಂದ ಆಡುವ ಮುನಿಕುಮಾರರ ಕಲಕಲಾಟವು.

ಕೌಸಲ್ಯೆ—ಬಾಲಕರ ಸೌಖ್ಯವು ಸುಲಭವಾದದ್ದು ( ಹೀಗೆಂದು ದಿಟ್ಟಿಸಿನೋಡುತ್ತಾ) ನೋಡಿದಿರಾ? ಇವರ ಮಧ್ಯದಲ್ಲಿ ನಮ್ಮ ರಾಮಭದ್ರನಂತೆ ಬಲಶಾಲಿಯಾಗಿರುವಂಥ ಸುಂದರವಾದ ಶರೀರಸೌಭಾಗ್ಯದಿಂದ ನನಗೆ ನೇತ್ರಾನಂದವನ್ನು ಕೊಡುವಂಥ ಈ ಬಾಲಕನು ಯಾರಿವನು?

ಅರುಂಧತಿ—(ಹರ್ಷೋದ್ರೇಕದಿಂದ ತನ್ನೊಳಗೆ) ನನಗೆ ಗಂಗಾದೇವಿಯು ಹೇಳಿದ ಕರ್ಣಾಮೃತದಂತಿರುವ ರಹಸ್ಯವು ಇದೇ ಎಂದು ತೋರುತ್ತದೆ; ಆದರೆ ಆಯುಷ್ಮಂತರಾದ ಕುಶಲವರಲ್ಲಿ ಈತನು ಯಾರಾಗಿರಬಹುದು?

ಕೌಸಲ್ಯೆ—

॥ ಶಾರ್ದೂಲವಿಕ್ರೀಡಿತಂ ॥

ಆರೀಮುಗ್ಧಶಿಖಂಡಾಭರಣನೀ ನೀಲೋತ್ಪಲಶ್ಯಾಮಲಂ ।
ಯಾರೀತಂ ಮುನಿಬಾಲರಂ ನಲಿಸುವಂ ಪುಷ್ಟಾಂಗಲಾವಣ್ಯದಿಂ ॥
ಶ್ರೀರಾಮಂ ಮದಪತ್ಯಮಾ ಮಗುವಿನೊಂದಾಕಾರಮಂ ತಾಳ್ದನೋ ।
ಆರ್ಯೆ ಕಣ್ಣಮೃತಾಂಜನಾದೊಡೆವನೀತಂ ನೋಟಕರ್ಗಾಕ್ಷಣಂ ॥ ೨೦ ॥

ಕಂಚುಕಿ—ನಾನಂತೂ ಖಂಡಿತವಾಗಿ ಈ ಹುಡುಗನು ಕ್ಷತ್ರಿಯಬ್ರಹ್ಮಚಾರಿಯೆಂದು ತಿಳಿಯುತ್ತೇನೆ.

ಜನಕ—ಹೌದು, ಯಾಕೆಂದರೆ ಈತನ ಚಿಹ್ನೆಗಳು ಹಾಗೇ ಕಾಣುತ್ತವೆ.

॥ ಮತ್ತೇಭವಿಕ್ರೀಡಿತಂ ॥

ಸರಳಿಂ ತುಂಬಿದ ಜೋಡುಬತ್ತಳಿಗಳಂ ಬೆನ್ನಲ್ಲಿ ಕಪ್ಪೆರ್ಪನಿಂ ।
ತರಳಂ ಚೊಡಿಕೆ ಜೋಲ್ವವಕ್ಷದೆಗೆಭಸ್ಮಂ ಬೊಗೆ ಕೃಷ್ಣಾಜಿನಂ ॥
ಮೆರೆಗುಂ ಮೌರ್ವಿಯ ಮಧ್ಯಸೂತ್ರಮದರಲ್ಲಾರಕ್ತಕೌಪೀನಕಂ ।
ಕರದೊಳ್ಕಾರ್ಮುಕಮಕ್ಷಸೂತ್ರವಲಯಂಗಳ್ದಂಡವಶ್ವತ್ಥದಾ ॥ ೨೦ ॥

ಅಮ್ಮಾ ಅರುಂಧತೀ, ಈತನು ಯಾರೆಂದು ನೀನು ತರ್ಕಿಸುತ್ತೀ?

ಅರುಂಧತಿ—ನಾವೂ ಈವೊತ್ತು ಇಲ್ಲಿಗೆ ಬಂದಿದ್ದೇವೆ, ಹ್ಯಾಗೆ ತಿಳಿದೀತು?

ಜನಕ—ಕಂಚುಕೀ, ನನಗೆ ಬಹಳ ಕೌತುಕವಾಗಿದೆ, ಆದದ್ದರಿಂದ ನೀನು ಹೋಗಿ ಭಗವಾನ್ ವಾಲ್ಮೀಕಿಮುನಿಗಳನ್ನೇ ಕೇಳು ಮತ್ತು ಆ ಹುಡುಗನಿಗೆ— "ಯಾರೋ ವೃದ್ಧರು ಬಂದಿದ್ದಾರಲ್ಲ! ಅವರು ನಿನ್ನನ್ನು ನೋಡಲಪೇಕ್ಷಿಸುತ್ತಾರೆ" ಎಂದು ಹೇಳು.

ಕಂಚುಕಿ—ಒಳ್ಳೇದು ದೊರೆಗಳೇ, (ಎಂದು ಹೊರಟು ಹೋಗುತ್ತಾನೆ.)

ಕೌಸಲ್ಯೆ—ಇಷ್ಟೇಮಾತಿಗೆ ಆ ಹುಡುಗನು ಬಂದಾನೇ?

ಅರುಂಧತಿ—ಇಂಥಾ ಉತ್ತಮಸೃಷ್ಟಿಯಲ್ಲಿ ಶಿಷ್ಟಾಚಾರದ ವಿಷಯಕ್ಕೆ ಎಂದಿಗೂ ಕೊರತೆಯಾಗಲಿಕ್ಕಿಲ್ಲ.

ಕೌಸಲ್ಯೆ—ಓವಯ್ಯಾ! ಆ ಹುಡುಗನು ಕಂಚುಕಿಯ ವಾಕ್ಯವನ್ನು ವಿನಯದಿಂದ ಕೇಳಿದವನಾಗಿ, ಆ ಕ್ಷಣವೇ ಮುನಿಕುಮಾರಕರನ್ನು ಬಿಟ್ಟು, ನಮ್ಮ ಕಡೆಗೇ ಬರುತ್ತಾನಲ್ಲಮ್ಮಾ!

ಜನಕ—(ಬಹಳ ಹೊತ್ತು ಚನ್ನಾಗಿ ನೋಡಿ) ಶಾಬಾಸ್ ಏನು ವಿಲಕ್ಷಣರೂಪವಿದು!

॥ ಶಾರ್ದೂಲವಿಕ್ರೀಡಿತವೃತ್ತ ॥

ಸೌಂದರ್ಯಂ ವಿನಯಂ ಶಿಶುತ್ವಮಿವನೊಂದಿರ್ಪಾಮಹಾತ್ಮ್ಯಾಕೃತೀ ।
ಕಂ ತೋರುತ್ತಿಹುದೀತನಲ್ಲಿ ತಿಳಿದರ್ಗಜ್ಞಗಂದಕ್ಷೀಯವು ॥
ಇದೆನ್ನೀ ಸ್ಥಿರಚಿತ್ತವನ್ನೆಳೆದುದೈ ವ್ಯಾಮೋಹವತ್ಯುತ್ಕಟಂ ।
ಬಂದೆನ್ನೊಳ್ ಸೆಳೆವಂತೆ ಕಣ್ಣಿದಿರಿಯುಂ ಕಾಂತೋನ್ನನಾಸೂಚಿಗಲ್ ॥ ೨೨ ॥

(ಇಷ್ಟರಲ್ಲಿ ಲವನು ಹತ್ತಿರಕ್ಕೆ ಬರುತ್ತಾನೆ)

ಲವನು—ಈ ಹಿರಿಯರೆಲ್ಲ ನನಗೆ ಮಾನ್ಯರೇ ಸರಿ. ಆದರೆ ಇವರ ಹೆಸರುಗಳೂ, ಅಧಿಕಾರಗಳೂ, ಕುಲಗಳೂ ನನಗೆ ಗೊತ್ತಿಲ್ಲ. ಯಾವ ರೀತಿಯಿಂದ ನಮಸ್ಕರಿಸಲಿ? (ಸ್ವಲ್ಪ ವಿಚಾರಮಾಡಿ) ಈ ಪ್ರಕಾರವು ವಿರುದ್ಧವೆಂದು ಹಿರಿಯರಿಂದ ಕೇಳಿದ್ದೇನೆ; ಈ ಪ್ರಸಂಗದಲ್ಲಿ ಹೀಗೆ ಮಾಡಬಹುದು, (ಎಂದು ವಿನಯದಿಂದ ಮುಂದೆ ಬಂದು) ತಮ್ಮೆಲ್ಲರಿಗೂ ಅನುಕ್ರಮವಾಗಿ ಈ ಲವನ ಸಾಂಷ್ಟಾಂಗ ಪ್ರಣಾಮವು.

ಅರುಂಧತೀ—ಜನಕರು—ಎಲೈ ಕಲ್ಯಾಣಶೀಲನೇ, ಆಯುಷ್ಯವಂತನಾಗು.

ಕೌಸಲ್ಯೆ—ಅಪ್ಪಯ್ಯಾ, ಚಿರಂಜೀವಿಯಾಗೋ.

ಅರುಂಧತಿ—ಬಾಳಾ, ಇಲ್ಲಿ ಬಾ. (ಎಂದು ತೊಡೆಯಮೇಲಿಟ್ಟು ತನ್ನೊಳಗೆ) ನನ್ನ ತೊಡೆಯು ಅಲಂಕೃತವಾಯಿತು. ಇಷ್ಟೇ ಅಲ್ಲ; ನನ್ನ ಮನೋರಥವೂ ಪೂರ್ಣವಾಯಿತು.

ಕೌಸಲ್ಯೆ—ಬಾಳಾ, ನನ್ನ ಕಡೆಗಿಷ್ಟು ಬಾರಪ್ಪಾ. (ಎಂದು ತೊಡೆಯ ಮೇಲೆ ಕೂಡ್ರಿಸಿಕೊಂಡು) ಅಹಹ! ಇದು ಬಹು ಆಶ್ಚರ್ಯವು! ಈ ಹುಡುಗನು ಅರೆ ಬಿರಿದ ಕನ್ನೈದಿಲ ಬಣ್ಣವುಳ್ಳ ಉದ್ದವಾದ ತನ್ನ ಮೈಕಟ್ಟಿನಿಂದಲೂ, ತಾವರೆ ಕೇಸರಗಳನ್ನುಂಡ ಮಧುರಕಂಠವುಳ್ಳ ಕಲಹಂಸದ ನಿರ್ಘೋಷದಂಥ ಉಚ್ಚ ಸ್ವರದಿಂದಲೂ, ನಮ್ಮ ರಾಮಭದ್ರನನ್ನು ಹೋಲುತ್ತಾನೆ; ಇಷ್ಟೇ ಅಲ್ಲ. ಈ ಬಾಲಕನ ಮೃದು ಕಠಿಣವಾಗಿರುವ ಪದ್ಮಗರ್ಭದಂತಿರುವ ಶರೀರದ ಸ್ಪರ್ಶವೂ ಹಾಗೇ ಇದೆ. ಎಲ್ಲಿ? ಬಾಳಾ ನೋಡೋಣ, ನಿನ್ನ ಮೋರೆಯನ್ನು ತೋರಿಸು. (ಎಂದು ಗಲ್ಲವನ್ನು ಹಿಡಿದು ಮೇಲಕ್ಕೆತ್ತಿ ದೃಷ್ಟಿಸಿನೋಡಿ ಕಣ್ಣಲ್ಲಿ ನೀರು ತಂದು, ತನ್ನೊಳಗೇ ಯೋಚನೆಮಾಡುತ್ತಾ ಜನಕರಾಜನಿಗೆ) ರಾಜರ್ಷಿಗಳೇ, ಈ ಹುಡುಗನ ಮುಖವನ್ನು ಚನ್ನಾಗಿ ನೋಡಿದಿರಾ? ನಮ್ಮ ಮಗಳಾದ ಸೀತೆಯ ಮುಖಚಂದ್ರನ ಛಾಯವೂ ಈತನ ಮುಖದಲ್ಲಿ ಕಾಣುತ್ತದೆ.

ಜನಕ—ಅಕ್ಕಾ, ನೋಡುತ್ತೇನೆ, ಅದನ್ನೇ ನೋಡುತ್ತೇನೆ. ನನಗೂ ಹಾಗೇ ತೋರುತ್ತದೆ.

ಕೌಸಲ್ಯೆ—ಎಲಎಲಾ! ಏನಾಶ್ಚರ್ಯವಿದು? ನನ್ನ ಚಿತ್ತಕ್ಕೆ ಉನ್ಮಾದವಾಯಿತೋ ಏನು? ಈ ಕಂದಯ್ಯನ ಮುಖವು ನನಗೆ ಹುಚ್ಚು ಹಿಡಿಸುತ್ತದೆ.

ಜನಕ—( ದಿಟ್ಟಿಸಿ ನೋಡುತ್ತಾ )

|| ಶಾರ್ದೂಲವಿಕ್ರೀಡಿತಂ ||

ಕಂದೂ ಮಂಗೆಯುಮಾರಘೂದ್ವಹನಿಗಿರ್ಪಾರೂಪಮಾಕಾಂತಿಯುಂ।
ಬಂದೀಬಾಲಕನಲ್ಲಿ ಬಿಂಬಿಸಿಹವೈ ನಿಃಶೇಷದಿಂ, ಸತ್ಯಮಿ॥
ಕಂದಃಗಾನುಡಿ ಮತ್ತದೇವಿನಯಮಾಪುಣ್ಯ ಪ್ರಭಾವಾದಿಸಂ।
ಬಂಧಂ; ಹಾವಿಧಿ! ಕಂಡಕಂಡಕಡೆಗೇಕೈ ಪೋಪುದೆನ್ನೀಮನಂ ॥ ೨೩ ॥

ಕೌಸಲ್ಯೆ—ಅಪ್ಪಯ್ಯಾ, ನಿನ್ನ ತಾಯಿ ಎಲ್ಲಿದ್ದಾಳೆ ? ಮತ್ತೂ ನಿಮ್ಮಪ್ಪನಾರು ? ನಿನಗೆ ಗೊತ್ತುಂಟೇ ?

ಲವನು—ಇಲ್ಲ, ಅದು ಯಾವದೂ ನನಗೆ ಗೊತ್ತಿಲ್ಲ.

ಕೌಸಲ್ಯೆ—ಹಾಗಾದರೆ ಬಾಳಾ, ನೀನು ಯಾರವನಪ್ಪಾ ?

ಲವನು—ಭಗವಾನ್ ವಾಲ್ಮೀಕಿ ಮುನಿಗಳೇ ನಮ್ಮ ಒಡೆಯರು.

ಕೌಸಲ್ಯೆ—ಅಪ್ಪಯ್ಯಾ, ನಾನು ಕೇಳಿದ್ದಕ್ಕೆ ಉತ್ತರವನ್ನು ಹೇಳುವದಿಲ್ಲವೇ ?

ಲವನು—ನನಗೆ ಇಷ್ಟೇ ಗೊತ್ತುಂಟು. ಹೆಚ್ಚಿನದನ್ನು ನಾನರಿಯೆನು.

( ಇಷ್ಟರಲ್ಲಿ ಪಡದೆಯೊಳಗೆ ಶಬ್ದವಾಗುತ್ತದೆ )

ಎಲೈ! ಸೈನಿಕರುಗಳಿರಾ, ನಮ್ಮ ಯುವರಾಜ ಚಂದ್ರಕೇತುವಿನ ಅಪ್ಪಣೆಯನ್ನು ಕೇಳಿರಿ. ಇದು ಭಗವಾನ್ ವಾಲ್ಮೀಕಿಮುನಿಗಳ ಆಶ್ರಮಪದವು. ಆದದ್ದರಿಂದ ಇದರ ಸಮೀಪದ ಭೂಮಿಯಲ್ಲಿ ಯಾರೂ ಕಾಲಿಡಬಾರದು. ಕೇಳಿದಿರಾ ?

ಅರುಂಧತೀ ಜನಕರು—ಆಹಾಹಾ! ಈವೊತ್ತಿನ ದಿವಸವೇ ಸುದಿವಸವು. ಅಧ್ವರದ ಪವಿತ್ರತುರಂಗವನ್ನು ಸಂರಕ್ಷಿಸಲಿಕ್ಕೆ ಚಂದ್ರಕೇತುವು ಇಲ್ಲಿಗೆ ಬಂದಿದ್ದಾನೆ. ಇಂದು ನಮ್ಮನ್ನು ಕಾಣುವವನಿದ್ದಾನೆಂದು ತೋರುತ್ತದೆ.

ಕೌಸಲ್ಯೆ—ಅಹಹ ! ಏನಿದು ? ವತ್ಸಲಕ್ಷ್ಮಣನ ಕುಮಾರನಾದ ಚಂದ್ರಕೇತುವು ಆಜ್ಞಾಪಿಸುತ್ತಾನೆಂಬ ಅಮೃತಬಿಂದುಗಳಂತೆ ಮಧುರವಾದ ಅಕ್ಷರಗಳು ಕಿವಿಯಲ್ಲಿ ಬೀಳುತ್ತವೆ.

ಲವನು—ಆರ್ಯರೇ, ಈ ಚಂದ್ರಕೇತುವೆಂಬಾತನು ಯಾರು ?

ಜನಕ—ತಮ್ಮಾ, ದಶರಥಮಹಾರಾಜನ ಮಕ್ಕಳಾದ ರಾಮ-ಲಕ್ಷ್ಮಣರನ್ನು ನೀನು ಬಲ್ಲಿಯಾ ?

ಲವನು—ಓಹೋ ! ರಾಮಾಯಣ ಕಥೆಗೆ ಇವರೇ ಕಾರಣಪುರುಷರಲ್ಲವೇ ?

ಜನಕ—ಹೌದು, ಸತ್ಯವೇ.

ಲವನು—ಹೀಗಿದ್ದಮೇಲೆ ನನಗೆ ಯಾಕೆ ಗೊತ್ತಿರಲಿಕ್ಕಿಲ್ಲ ?

ಜನಕ—ಆ ಲಕ್ಷ್ಮಣನ ಕುಮಾರನೇ ಚಂದ್ರಕೇತುವೆಂಬಾತನು.

ಲವನು—ತಿಳಿಯಿತು; ಈತನು ಊರ್ಮಿಳಾ ಪುತ್ರನು, ಮಿಥಿಲಾಪತಿಯಾದ ಜನಕನ ಮೊಮ್ಮಗನು. ಹೌದೇ ?

ಅರುಂಧತಿ— ( ನಕ್ಕು ) ಈ ಹುಡುಗನು ರಾಮಾಯಣ ಕಥೆಯಲ್ಲಿ ನಿಪುಣನಾಗಿದ್ದಾನೆಂಬಂತೆ ಕಾಣುತ್ತದೆ.

ಜನಕ— ( ಆಲೋಚಿಸಿ ) ನೀನು ಈ ಕಥೆಯಲ್ಲಿ ಇಷ್ಟು ಬಲ್ಲಿವನಿದ್ದರೆ, ನಾವು ಕೇಳುತ್ತೇವೆ; ಅದನ್ನೆಲ್ಲ ಹೇಳೋಣ್ಳೇದು. ಆ ದಶರಥ ಕುಮಾರರ ಯಾವ ಯಾವ ಹೆಂಡರಲ್ಲಿ ಎಷ್ಟೆಷ್ಟು ಮಂದಿ ಮಕ್ಕಳು ?

ಲವನು—ಈ ಕಥಾಭಾಗವು ನಮ್ಮಿಂದಾಗಲಿ, ಮತ್ತೆ ಯಾರಿಂದಾಗಲಿ ಓದಲ್ಪಟ್ಟಿಲ್ಲ.

ಜನಕ—ಯಾಕೆ ? ಅದು ಕವಿಯಿಂದಲೇ ರಚಿಸಲ್ಪಟ್ಟಿಲ್ಲವೋ ? ಏನು ?

ಲವನು—ರಚಿಸಲ್ಪಟ್ಟದೆ, ಆದರೆ ಪ್ರಸಿದ್ಧವಾಗಿಲ್ಲ. ಅದೇ ಕಾಂಡದ ಒಂದು ಭಾಗವನ್ನು ಮತ್ತೊಂದು ಸಂದರ್ಭದಿಂದ ಸುರಸನಾಟಕವನ್ನು ಮಾಡಿ, ಭಗವಾನ್ ವಾಲ್ಮೀಕಿ ಮುನಿಗಳು ತಮ್ಮ ಕಯ್ಯಿಂದ ಬರೆದು, ನಾಟ್ಯಶಾಸ್ತ್ರಚಾರ್ಯನಾದ ಭರತಮುನಿಯ ಕಡೆಗೆ ಕಳುಹಿದ್ದಾರೆ.

ಜನಕ—ಯಾವ ಕಾರಣದಿಂದ ?

ಲವನು—ಆ ಮಹಾನುಭಾವನು ಅವನ್ನು ಗಂಧರ್ವರಿಂದ ಪ್ರಯೋಗ ಮಾಡಿಸಿ ತೋರಿಸತಕ್ಕವನಿದ್ದಾನೆ.

ಜನಕ—ಹೀಗಿದ್ದಮೇಲೆ ಇದೆಲ್ಲ ನಮಗೆ ಬಹಳ ಕೌತುಕವನ್ನುಂಟು ಮಾಡುತ್ತದೆ.

ಲವನು—ನಮ್ಮ ಗುರುಗಳಿಗಂತೂ ಈ ವಿಷಯದಲ್ಲಿ ಬಹಳೇ ಹಂಬಲವದೆ. ಆ ಪುಸ್ತಕವನ್ನು ಒಬ್ಬ ದೊಡ್ಡ ಶಿಷ್ಯನ ಕಯ್ಯಲ್ಲಿ ಕೊಟ್ಟು ಭರತಮುನಿಗಳಾಶ್ರಮಕ್ಕೆ ಕಳುಹುವಾಗ ಅದನ್ನು ಜಾಗ್ರತನಾಗಿ ಕಾಪಾಡಲಿಕ್ಕೆ ನನ್ನ ಸಹೋದರನು ಧನುಷ್ಪಾಣಿಯಾಗಿ ಕಳುಹಲ್ಪಟ್ಟಿದ್ದಾನೆ.

ಕೌಸಲ್ಯೆ—ಬಾಳಾ, ನಿನಗೆ ಸಹೋದರನೂ ಇದ್ದಾನೇನೋ ?

ಲವನು—ಹೌದು ಇದ್ದಾನೆ, ಆತನ ಹೆಸರು ಕುಶನು; ನಾನು ಆತನಿಗೆ ಅಣ್ಣಾ ಎಂದು ಕರೆಯುತ್ತೇನೆ.

ಕೌಸಲ್ಯೆ—ಹೀಗಿದ್ದರೆ ಅವನು ನಿನಗಿಂತ ಹಿರಿಯನಾದನಲ್ಲ ?

ಲವನು—ಸರಿಸರಿ, ಜನನಕ್ರಮದಿಂದ ಆತನೇ ನನಗಿಂತ ಹಿರಿಯನು.

ಜನಕ—ಏನು ತಮ್ಮಾ, ನೀವಿಬ್ಬರೂ ಅವಳಿಜವಳಿಗಳೇ ?

ಲವನು—ಮತ್ತೇನು ?

ಜನಕ—ಒಳ್ಳೇದು, ನೀವು ರಾಮಾಯಣ ಕಥೆಯನ್ನು ಎಲ್ಲಿಯ ವರೆಗೆ ಬಲ್ಲಿರಿ ?

ಲವನು—ಪ್ರಜೆಗಳು ಹುಟ್ಟಿಸಿದ ಸುಳ್ಳು ಅಪವಾದದಿಂದ ಉದ್ವಿಗ್ನಚಿತ್ತನಾದ ರಾಮರಾಜನಿಂದ ಬಿಡಲ್ಪಟ್ಟ ದೇವಯಜನಸಂಭವೆಯಾದ ಪ್ರಸವವ್ಯಥೆಯನ್ನು ಹೊಂದಿದ ಸೀತಾದೇವಿಯನ್ನು ಒಬ್ಬಳನ್ನೇ ಅರಣ್ಯದಲ್ಲಿ ಬಿಟ್ಟು ಲಕ್ಷ್ಮಣನು ತಿರುಗಿ ಹೋದನು. ಇಲ್ಲಿಯವರೆಗೆ.

ಕೌಸಲ್ಯೆ—ಅಯ್ಯೋ ಮಗಳೇ ! ಹಾ ಬಾಲಚಂದ್ರಮುಖಿಯೇ ! ನೀನೊಬ್ಬಳೇ ಅಡವಿಯಲ್ಲಿ ಕಷ್ಟಪಡುತ್ತಿರುವಾಗ ಹೂವಿನಂಥ ನಿನ್ನ ಶರೀರದ ಅವಸ್ಥೆಯು ದೈವದುರ್ವಿಯೋಗದಿಂದ ಏನಾಗಿರಬಹುದು ?

ಜನಕ—ಅಯ್ಯೋ ! ಕಂದಮ್ಮಾ ! ನನ್ನೆದೆಯು ಸೀಳುತ್ತದೆ .

|| ವಸಂತತಿಲಕ ||

ಹೀಗಾಣದಿರ್ದಪಯಶೋವಿಷಯಮುಗ್ರ ಕಷ್ಟಂ ।
ನೀಂಗಾಪ್ರಸೂತಿಸಮಯವ್ಯಥೆಯುಂ ಬರಲ್ಕೆ ॥
ಕಂಗಾಲರಕ್ಕಸರು ಸುತ್ತಲು ಮುತ್ತೆ; ನಾನಾ ।
ಕೆಂಗೆಟ್ಟು ಕಾಯೆನುತೆ ಕೂಗಿದೆ ! ಮತ್ತೆಮತ್ತೆ ॥ ೨೪ ॥

ಲವನು—(ಅರುಂಧತಿಗೆ) ಅಮ್ಮಾ, ಇವರು ಯಾರು? ಬಹು ದುಃಖಪಡುತ್ತಾರೆ.

ಅರುಂಧತಿ— ಈಕೆಯು ಕೌಸಲ್ಯೆಯು, ಈತನು ಜನಕರಾಜನು.

ಲವನು— (ಬಹುಮಾನ ಖೇದಕೌತುಕಗಳಿಂದ ನೋಡುತ್ತಾನೆ.)

ಜನಕ— ಎಲಎಲಾ !! ಏನು ಮಾಡಲಿ? ನೀಚಪ್ರಜೆಗಳ ಅಮರ್ಯಾದೆಯೂ, ರಾಮರಾಜನ ಅವಿಚಾರದ ತ್ವರೆಯೂ ಮಿತಿಮೀರಿದವು.

|| ವಸಂತತಿಲಕ ||

ಆಲೋಚಿಸಾಗೆದೆಯೊಳಾವಗಮಪ್ಪುದೆನ್ನಾ ।
ಜ್ವಾಲಾವಿಸತ್ತ್ವನಿಪ ಭೀಕರವಜ್ರಪಾತಂ ॥
ಕಾಲಂ ಧಗೆಂದುರಿಯಲಿಕ್ಕುದು ತಾನರೋಷಂ ॥
ತಾಳಲ್ ಕರಾಗ್ರದಲಿ ಪಾಸವ ಶಾಪವೀಯಲ್ ॥ ೨೫ ॥

ಕೌಸಲ್ಯೆ— ಓಮಾ ಭಗವತೀ ಅರುಂಧತಿಯೇ ಕಾಪಾಡು ! ಕಾಪಾಡು! ರಾಜರ್ಷಿಯು ಕ್ರುದ್ಧನಾದನು; ಬೇಗನೇ ಪ್ರಸನ್ನೀಕರಿಸು!

**ಅರುಂಧತಿ**— ಎಲೈ ಅರಸೇ, ತಾಳುಃ—

॥ ವಸಂತತಿಲಕ ॥

ಈವರ್ ಮನಸ್ವಿಗಳು ತಮ್ಮಪರಾಧವನ್ನು ।
ಗೆಯ್ವಾದುರಾತ್ಮಕರಿಗೀಪರಿದಂಡವನ್ನು ॥
ಭೂವಲ್ಲಭಾ ರಘುಕುಲೇಂದ್ರನು ನಿನ್ನಪತ್ಯಂ ।
ಕಾವಂ ಬಡಪ್ರಜೆಗಳಂ ಕರುಣಾಂಬುರಾಶೀ ॥ ೨೬ ॥

**ಜನಕ**— (ಮನಸಿನಲ್ಲಿ ವಿಚಾರಮಾಡಿ) ಅಮ್ಮಾ,

॥ ವಸಂತತಿಲಕ ॥

ಹೌದೆನ್ನ ಭಾಗ್ಯನಿಧಿ ರಾಮನಪತ್ಯರೂಪಂ ।
ಸ್ತ್ರೀದೀನವಿಪ್ರಶಿಶುವೃದ್ಧಯುತಂ ಪ್ರಜೌಘಂ ॥
ಆದಪ್ಪುದಾಗುವದು ತಪ್ಪಿಸಲಾರ್ ಸ್ವತಂತ್ರರ್ ।
ಕೋದಂಡವಂತಿರಲಿ! ಮಾಣಲಿ ಶಾಪದಂಡು ॥ ೨೭ ॥

(ಇಷ್ಟರಲ್ಲಿ ಓಡುತ್ತೋಡುತ್ತಾ ಮುನಿಕುಮಾರರು ಬರುತ್ತಾರೆ)

ವಟುಗಳು—ಏ ಲವಾ, ಇದು ನೋಡು! ಕುದುರೆ ಕುದುರೆ ಎಂದು ಯಾಜ್ಞಿಕಪ್ರಕರಣದಲ್ಲಿ ಹೇಳಿದ ಪ್ರಾಣಿವಿಶೇಷವು ಲೋಕದಲ್ಲಿ ಉಂಟೆಂದು ಕೇಳುತ್ತಿದ್ದೆವಲ್ಲ? ಅದನ್ನು ಅನಾಯಾಸವಾಗಿ ಕಣ್ಣಾರೆ ಕಂಡೆವು.

ಲವನು— ಹುಡುಗರಿರಾ ಯಾಜ್ಞಿಕಪ್ರಕರಣದಲ್ಲೂ, ಯುದ್ಧಪ್ರಕರಣದಲ್ಲೂ ಕುದುರೆಕುದುರೆ ಎಂದು ಹೇಳಿರುವದುಂಟು. ಆದರೆ ನೀವು ಕಂಡದ್ದು ಎಂಥಾದ್ದೆಂಬದನ್ನು ಹೇಳಿರಿ.

ವಟುಗಳು—ಹಾಗಾದರೆ ಕೇಳುಃ—

॥ ಮತ್ತೇಭವಿಕ್ರೀಡಿತಂ ॥

ಅದಕುಂಟ್ಕೆ ಪೃಥುರಮ್ಯಪುಚ್ಛಮದನಾಗಳ್ ಜಾಡಿಸುತ್ತಾಡುತಿ ।
ರ್ಪುದು ತತ್ಕಂಧರಮುಂಟು ದೀರ್ಘಜಟೆಯಿಂ ನಾಲ್ಕೇಖುರಂಗಳ್ ಲವಾ ॥
ಅದುಪುಲ್ಮೇವುದು, ಲದ್ದಿಯುಂ ಪಡಪುಗುಂ ಚೂತಪ್ರಮಾಣಂಗಳಂ ।
ನಗನೋಡಲ್ ನಡೆ ಪೋಪಮೀ ನುಡಿಗಳಿಂದೇಂ ? ದೂರದೊಳ್ ಪೋಪುದು ॥ ೨೮ ॥

(ಹೀಗೆಂದು ಬಳಿಗೆ ಬಂದು ಕೆಲವರು ಕಮ್ಬಳಿಯನ್ನೂ, ಕೆಲವರು ಕೃಷ್ಣಾಜಿನವನ್ನೂ ಹಿಡಿದೆಳೆಯುತ್ತಾರೆ)

ಲವನು —( ತೊಂದರೆಪಡುವವನಂತೆ ) ಎಲಾ? ನಿಲ್ಲಿರೋ ಮಕ್ಕಳಿರಾ ನಿಲ್ಲಿರಿ. (ವಿನಯದಿಂದಲೂ, ಕೌತುಕದಿಂದಲೂ) ಹಿರಿಯರೇ, ನೋಡಿರಿ ನೋಡಿರಿ! ಇವರು ನನ್ನನ್ನು ಎಳೆದೊಯ್ಯುತ್ತಾರೆ; ಏನು ಮಾಡಲಿ (ಎಂದು ಹೊರಟು ಹೋಗುತ್ತಾನೆ.)

ಅರುಂಧತೀಜನಕರು—ಈ ಕಂದಯ್ಯನು ನಮ್ಮ ಕುತೂಹಲವನ್ನು ಪೂರ್ಣ ಮಾಡಲಿ!

ಕೌಸಲ್ಯೆ—ತಾಯಿ ಅರುಂಧತೀ, ಈ ಬಾಲಕನು ಕಣ್ಮರೆಯಾದರೆ, ನಾನು ಇರಲಾರೆನು. ಆದರಿಂದ ಮತ್ತೊಂದುಕಡೆಗೆ ನಿಂತು, ಓಡಿಹೋಗುವ ಈ ಕುಮಾರನನ್ನು ನೋಡೋಣ.

ಅರುಂಧತಿ— ಓಹೋ! ಆ ಉಲುಕೋಚಿಹುಡುಗನು ಅತಿವೇಗದಿಂದ ಬಹಳದೂರ ಹೋದನು. ಇನ್ನು ಕಾಣುವ ಬಗೆ ಹ್ಯಾಗೆ? ( ಇಷ್ಟರಲ್ಲಿ ಕಂಚುಕಿಯು ಬರುತ್ತಾನೆ )

ಕಂಚುಕಿ—ಮಹಾನುಭಾವರಾದ ವಾಲ್ಮೀಕಿಮುನಿಗಳು ಈಗಳೇ ಬಿಜಯಂ ಮಾಡಿ, ಹೇಳುವವನ್ನು ಕೇಳಿಕೊಳ್ಳಬೇಕೆಂದು ಆಜ್ಞಾಪಿಸುತ್ತಾರೆ; ಕಾರಣ ಬರ ಬೇಕು.

ಜನಕ— ಇದೇನೋ! ಬಹು ಗಾಂಭೀರ್ಯದ ಮಾತಾಗಿರಬಹುದು. ಅರುಂಧತಿಯಮ್ಮನವರೇ, ಅಕ್ಕಾ ಕೌಸಲ್ಯೆ, ಎಲೈ ಕಂಚುಕೀ, ನಡೆಯಿರಿ, ನಾವು ಪ್ರಾಚೇತಸರ ಸನ್ನಿಧಿಯನ್ನು ಕಾಣುವಾ (ಎಂದು ಎಲ್ಲರೂ ಹೊರಟುಹೋದರು)

ವಟುಗಳು—ಗೆಳೆಯಾ ಲವನೇ, ನೋಡು ನಾವು ಕಂಡ ಚಮತ್ಕಾರದ ಪ್ರಾಣಿ ಇದೇ.

ಲವನು—ನೋಡಿದೆನು ಮತ್ತು ನನಗೆ ಇದು ಎಂಥಾದೆಂಬದು ತಿಳಿಯಿತು:- ಇದು ಅಶ್ವಮೇಧದ ಕುದುರೆಯು.

ವಟುಗಳು—ಹ್ಯಾಗೆ ತಿಳಿಯಿತೋ ಲವಾ?

ಲವನು— ಎಲಾ! ನೀವೆಲ್ಲಾ ಶುಂಭರಿದ್ದೀರಿ, ಅಶ್ವಮೇಧಕಾಂಡವನ್ನು ನೀವು ಓದಿಲ್ಲವೇ? ಮತ್ತು ಶಾಸ್ತ್ರೋಕ್ತವಾಗಿ ನೂರುಜನ ಚಿಲಕ್ತನ ಸ್ವಾರರೂ, ಇಷ್ಟೇ ದಂಡಧಾರಿಗಳೂ ಧನುರ್ಧಾರಿಗಳೂ ರಕ್ಷಕರಾಗಿ ಇದರ ಬೆನ್ನಿಗಿದ್ದಾರೆ. ಇದೂ ನಿಮ್ಮ ಕಣ್ಣುಗಳಿಗೆ ಕಾಣುವದಿಲ್ಲವೇ? ನನ್ನ ಮಾತಿನ ನಂಬಿಗೆ ಇಲ್ಲದ ಪಕ್ಷದಲ್ಲಿ ಅವರನ್ನೇ ಹೋಗಿ ಕೇಳಿರಿ.

ವಟುಗಳು—ಎಲೈ! ಸೈನಿಕರಿರಾ! ಇಷ್ಟುಸನ್ನಾಹದಿಂದ ಕೂಡಿದ ಈ ಕುದುರೆಯು ಯಾಕೆ ಹೀಗೆ ತಿರುಗಾಡುತ್ತದೆ? ಹೇಳಿರಿ.

ಲವನು—(ಅಭಿಲಾಷಾಯುಕ್ತನಾಗಿ ತನ್ನೊಳಗೆ) ಓಹೋ ಅಶ್ವಮೇಧವೆಂದರೆ—ಜಗಜ್ಜಯಾಕಾಂಕ್ಷಿಗಳಾದ ಕ್ಷತ್ರಿಯರಿಗೆ ಎಲ್ಲ ಅರಸರನ್ನು ಸೋಲಿಸುವದಕ್ಕೆ ಬಲವಾದ ಉಪಾಯವು ಮತ್ತು ಅವರ ಶೌರ್ಯದ ಪರಮಾವಧಿಯು.

(ಇಷ್ಟರಲ್ಲಿ ಹಿಂದೆ ಶಬ್ದವಾಗುತ್ತದೆ.)

॥ ಇಂದ್ರವಜ್ರಂ ॥

ಈರೇಳುಲೋಕಂಗಳಿಗೊರ್ವವೀರಂ ।
ಶ್ರೀರಾಮನಾ ರಾವಣವಂಶಕಾಲಂ ॥
ಆರಾಜಶಾರ್ದೂಲನದೀತುರಂಗಂ ।
ಭಾರೀಧ್ವಜಂ ಪೀಂದ ವೀರಘೋಷಂ ॥ ೨೯ ॥

ಲವನು—(ಸಂಕಟಸಹಮತ್ಸರನಾಗಿ) ಅಹಹ ! ಅಹಹ ! ಈ ಅಕ್ಷರಗಳು ನನ್ನ ಎದೆಯನ್ನು ಸುಡುತ್ತವೆ.

ವಟುಗಳು—ಏ ಲವಾ, ಏನಂದೀ ? ಅಕ್ಷರಗಳು ಎದೆಯನ್ನು ಹ್ಯಾಗೆ ಸುಡುತ್ತವೆ! ನೀನು ಹುಚ್ಚನೋ ಏನು ?

ಲವನು—ಹುಡುಗರಿರಾ ಸುಮ್ಮನಿರ್ರಿ, ಎಲೈ ಸೈನಿಕರಿರಾ, ಭೂದೇವಿಯು ನಿಃಕ್ಷತ್ರಿಯಳಾದಳೇ? ಅದಕ್ಕಂತೇ ನೀವು ಇಷ್ಟುಸೊಕ್ಕಿನಿಂದ ಮಾತಾಡುತ್ತೀರಿ ಎಂಬಂತೆ ಕಾಣುತ್ತದೆ.

(ಪುನಃ ಪಡದಯಲ್ಲಿ ಶಬ್ದವಾಗುತ್ತದೆ.)

ಎಲಾ, ನಮ್ಮ ಮಹಾರಾಜರ ಮುಂದೆ ನಿಲ್ಲುವಂಥಾ ಶೂರಕ್ಷತ್ರಿಯರು ಎಲ್ಲಿದ್ದಾರೋ ?

ಲವನು—ಛೀ! ಅಧಮರಿರಾ, ಅವಿಚಾರಿಗಳಿರಾ, ನಿಮಗೆ ಧಿಕ್ಕಾರವಿರಲಿ!

॥ದ್ರುತವಿಲಂಬಿತವೃತ್ತ॥

ಇರಲಿ, ತಾವವರಿದ್ದೊಡಮಿರ್ದಪರ್ ।
ಬರಿಯಬೆಚ್ಚಿನ ಡಂಗುರವೇನಿದು ? ॥
ಶರದಿಸೀಳ್ದ ಪೆನುಕ್ತಿಗಳೇಕೆ ? ನಿಂ ।
ಮುರುಪತಾಕೆಯುನಾಗುವದಾಗಲಿ ॥ ೩೦ ॥

ಎಲೈ ಗೆಳೆಯರಿರಾ, ಹೆಂಟೆಗಳಿಂದ ಕುಟ್ಟುತ್ತಾ, ಇದನ್ನು ಅಟ್ಟಿಕೊಂಡು ನಡಿಯಿರೋ! ಈ ಕಾಡುಗುದುರೆಯು ಆ ನಮ್ಮ ಚಿಗರೆಯಹಿಂಡಿನಲ್ಲಿ ಮೇಯುತ್ತಿರಲಿ!

( ಇಷ್ಟರಲ್ಲಿ ಕ್ರೋಧಗರ್ವಿತನಾದ ಒಬ್ಬ ಪುರುಷನು ಬರುತ್ತಾನೆ. )

ಛೀ ಪೋರಾ ! ನಿನ್ನ ಹುಡುಗಾಟಿಕೆಗೆ ಧಿಕ್ಕಾರವಿರಲಿ ! ಏನು ಬೊಗಳುತ್ತೀ ? ಈ ಶಸ್ತ್ರಧಾರಿಗಳು ಕರುಣಾಶೂನ್ಯರಿದ್ದಾರೆ! ಬಹಳ ಕ್ರೂರರು; ಸಣ್ಣಮಕ್ಕಳಾದರೂ ಸೊಕ್ಕಿನ ಮಾತನ್ನಾಡಿದರೆ, ಸೈರಿಸುವವರಲ್ಲ. ಮತ್ತು ನಮ್ಮ ರಾಜಕುಮಾರ ಚಂದ್ರಕೇತುವು ಅಪೂರ್ವವಾದ ಈ ಅರಣ್ಯವನ್ನು ನೋಡಬೇಕೆಂಬ ಹಂಬಲದಿಂದ ಧನುರ್ಧಾರಿಯಾಗಿ ದೂರಹೋಗಿದ್ದಾನೆ. ಇನ್ನೂ ಬಂದಿಲ್ಲ. ಅಷ್ಟರಲ್ಲಿ ಈ ಗಿಡಗಳ ಗುಂಪುಗಳ ಮರೆಯಿಂದ ಓಡಿಹೋಗಿರಿ.

ವಟುಗಳು—ಏ ಲವಾ, ಸಾಕು ಈ ಕುದುರೆಯಿಂದ ನಮಗೇನು ? ಈ ಶಸ್ತ್ರಧಾರಿಗಳು ಖಡ್ಗಗಳನ್ನು ಹೊಳಪಿಸುತ್ತಾ ನಿನ್ನನ್ನು ಬೆದರಿಸುತ್ತಾರೆ. ಆಶ್ರಮಸ್ಥಾನವೂ ಇಲ್ಲಿಂದ ದೂರ ಉಳಿಯಿತು. ಆದದ್ದರಿಂದ ನಡೆ, ನಾವು ತ್ವರವಾಗಿ ಚಿಗರೆಯುಹಾರಿಕೆಗಳನ್ನು ಹಾರುತ್ತಾ ಓಡಿಹೋಗೋಣ.

ಲವನು—ಏನು ? ಶಸ್ತ್ರಗಳನ್ನು ಹೊಳಪಿಸುತ್ತಾರೋ ? ಬೆದರಿಸುತ್ತಾರೋ ? ಒಳ್ಳೇದೊಳ್ಳೇದು!! ( ಹೀಗೆಂದು ಧನುಸ್ಸಿಗೆ ಹದೆಯೇರಿಸುತ್ತಾನೆ )

॥ ಮತ್ತೇಭವಿಕ್ರೀಡಿತಂ ॥

ಹೆದೆ ನೀಳ್ನಾಲಿಗೆ, ಕೋರೆದಾಡೆಗಳೆರಳ್ಕೊಗ್ಗೊಪ್ಪುಗಳ್, ಕೇಳಿದಾ ।
ಗೆದೆಯಂ ಸೀಳುವ ಘೋರಘರ್ಘರಿತಘೋಷಂ ಕ್ರೂರ ಕೋಲಾಹಲಂ; ॥
ಇದು ಲೋಕಂಗಳನಟ್ಟಹಾಸದಲಿ ನುಂಗುತ್ತಿರ್ಪ ಕಾಲಾಂತಕಾ ।
ಸ್ಯದಜೃಂಭಂಗಳ ಮೀರ್ವರೌದ್ರಜಠರಂ ಕೈಗಿರ್ಕೆ ಕೋದಂಡವು ॥ ೩೧ ॥

( ಹೀಗೆ ಯಥೋಚಿತವಾಗಿ ಎಲ್ಲರೂ ಹೊರಟು ಹೋಗುತ್ತಾರೆ )

( ಕೌಸಲ್ಯಾಜನಕರ ಸಂದರ್ಶನವೆಂಬ ನಾಲ್ಕನೇ ಅಂಕವು ಸಂಪೂರ್ಣವು. )



# ಉತ್ತರರಾಮಚರಿತ್ರನಾಟಕವು.

## ೫ನೇ ಅಂಕವು.

( ಪರದೆಯಲ್ಲಿ ಶಬ್ದವಾಗುತ್ತದೆ )

ಎಲೈ ಸೈನಿಕರುಗಳಿರಾ, ನಮಗೆ ಬೆಂಬಲವು ಬಂತು, ಬಂತು, ಹೆದರಬೇಡಿರಿ.

॥ ಮತ್ತೇಭವಿಕ್ರೀಡಿತಂ ॥

ಇದೆಬರ್ಪಂ ದೊರೆ ಚಂದ್ರಕೇತುವರಿದೆವಿಲ್ಮೊಯುದ್ಧವೃತ್ತಾಂತಮಂ ।
ಚದುರಿಂ ನೂಕೆ ವರೂಥಮಂ ವಹಿಲದಿಂ ಸೂತಂ ಸುಮಂತ್ರಾಹ್ವಯಂ ॥
ಪುದಿಯಲ್ ಧೂಳ್ ನಭಕೋಡುತಿರ್ಪವು ಹಯಂಗಳ್ ವೇಗದಿಂ ಕಂಪಿಸು ।
ತ್ತಿದೆ ಕಂಚಾಳದ ಕೇತನಂ ವಿಷಮಭೂಭಾಗೋಪಘಾತಂಗಳಿಂ ॥ ೧ ॥

( ಬಳಿಕ ಸುಮಂತ್ರಸಾರಥಿಯಿಂದ ನಡೆಸಲ್ಪಡುವ ರಥದಲ್ಲಿ ಧನುಷ್ಪಾಣಿಯಾಗಿ ಕೂತಂಥ ಅದ್ಭುತ ಹರ್ಷಸಂಭ್ರಮಯುಕ್ತನಾದ ಚಂದ್ರಕೇತು ಬರುತ್ತಾನೆ. )

॥ ಮತ್ತೇಭವಿಕ್ರೀಡಿತಂ ॥

ಬಗೆಗಾಶ್ಚರ್ಯಮನೀವನೈ ಹಸುಳನೋರ್ವಂ ತಾಪಸಾಕಾರದ ।
ರಘುಸಂತಾನದ ನೂತನಾಪರಿಚಿತಾಂಕೂರಂಬೊಲಿಂಗಿನ್ನಯಾ ॥
ಉಗಿದೆಚ್ಚುಜ್ವಲದುಗ್ರಬಾಣತತಿಯಂ, ಟಂಕಾರಮಂಗೆಯ್ವನಿ ।
ಬ್ಬಗೆವಾಳ್ಪಂ ಕರಿಮಸ್ತಕಂಗಳನಿವಂ ಹಿಂದೊತ್ತುವಂ ಸೈನ್ಯಮಂ ॥ ೨ ॥

॥ ಶಾರ್ದೂಲವಿಕ್ರೀಡಿತವೃತ್ತಂ ॥

ಆರ್ಯ? ಲೋಲಶಿಖಂಡಸುಂದರನಿವಂ ವೀರಾರ್ಭಕಂ ಭಾಪು! ಝೇಂ ।
ಕಾರಂಗೆಯ್ದು ರಣಾಗ್ರದೊಳ್ ಪಡೆಯಮೇಲ್ ಕೋದಂಡದಿಂದಾವಗಂ ॥
ಧೀರಂ ಬಾಣತುಷಾರಮಂ ಸುರಿಸುತಿರ್ಪಂ ಕೈಗೆಡಂ ನೋಡು ನೋ ।
ಡೈರೋಷಾರುಣವಕ್ತ್ರಶೋಭೆಸಲಂಗೀತಂಗದೊತ್ತೊಪ್ಪುಗುಂ ॥ ೩ ॥

ಸುಮಂತ್ರನು—ವತ್ಸಾ ಕೇಳು.

॥ ವಸಂತತಿಲಕ ॥

ಈ ಕಂದನಾಕೃತಿಯು ನಿನ್ನದೆ ನೋಡೆಸತ್ತ್ವೋ ।
ದ್ರೇಕಂಗಳಿಂದಮುರದ್ವೈತ್ಯರ ಗೆಲ್ವನೀತಂ ॥
ಆಕೌಶಿಕಕ್ರತುವಿಘಾತಕರಂ ಕೊಲಲ್ಕೆ ।
ಕೈಕೊಂಡಚಾಪದ ರಘೂದ್ವಹನಂತೆ ತೋರ್ಪಂ ॥ ೪ ॥

ಚಂದ್ರಕೇತು—ಈ ಒಬ್ಬನ ಮೇಲೆ ಲೆಕ್ಕವಿಲ್ಲದ ಸೈನಿಕರು ಯುದ್ಧಕ್ಕೆ ಹೋಗುತ್ತಾರಲ್ಲ ? ಇದರಿಂದ ನನಗೆ ನಾಚಿಕೆ ಬರುತ್ತದೆ.

॥ ಮತ್ತೇಭವಿಕ್ರೀಡಿತಂ ॥

ಮಿಸುಪಸ್ತ್ರಂಗಳನಾಂತು ಕೈದಳಿರ್ಗಳೊಳ್ಕಾಲಾಳ್ಬಲಂ ಭೀಕರಂ ।
ಪೊಸಪೊಂಗೆಜ್ಜೆಗಳಿಂ ಝಣಂಝಣರಿನುತ್ತಿರ್ಪಾನವರೂಥಗಳು ॥
ಕೆಸರಪ್ಪಂತೆ ರಣಾಂಗಣಂ ಮದರಸಾಚಳ್ವನೆವಿಾಡಭ್ರದೊಲ್ ।
ಹಸುಳಂ ತಾನಿವನೋರ್ವನಾ ಮುಸುಕಿತೀಸೈನ್ಯಂ ರಣಾಟೋಪದಿಂ ॥ ೫ ॥

ಸುಮಂತ್ರ—ವತ್ಸಾ, ಈ ಎಲ್ಲರೂ ಕೂಡಿದಾಗ್ಯೂ ಇವರಿಂದ ಅವನಿಗೆ ಏನೂ ಆಗುವಹಾಗಿಲ್ಲ. ಇನ್ನು ಒಬ್ಬೊಬ್ಬರೇ ಹೋಗಿ ಇವರು ಮಾಡುವದೇನು ?

ಚಂದ್ರಕೇತು—ಸುಮಂತ್ರರೇ, ರಥವನ್ನು ಬೇಗನೇ ಓಡಿಸಿರಿ ! ಈ ವೀರನಿಂದಾಗುವ ನಮ್ಮ ಸೈನ್ಯದ ಸಂಹಾರವು ಮಿತಿಮಿಾರಿತು- ನೋಡಿದಿರಾ ?

॥ ಮತ್ತೇಭವಿಕ್ರೀಡಿತಂ ॥

ಮೊರೆಯುತ್ತಂ ಗಿರಿಕುಂಜದಲ್ಲಿಹಗಜೇಂದ್ರಂಗಳ್ಗೆ ಕರ್ಣವ್ಯಥಾ ।
ಕರಮಂ, ದುಂದುಭಿನಾದದಿಂ ಬೆಳೆಯುವಾ ಜ್ಯಾಘೋಷಮಂ ತೋರುವಂ ॥
ಭರದಿಂದೋಕರಿಸಿರ್ಪನಂತಕನಜೀರ್ಣಕ್ಲೇಶಕೆಂಬಂತೆ, ಭೀ ।
ಕರದಿಂ ನರ್ತಿಪರುಂಡಮುಂಡಗಣದಿಂ ಯುದ್ಧಾಂಗಣಂದೀವಿಸು ॥ ೬ ॥

ಸುಮಂತ್ರ—( ತನ್ನೊಳಗೆ ) ಇಂಥಾ ಶೂರನೊಡನೆ ಇನ್ನೂ ಹಸುಳನಾಗಿರುವ ನಮ್ಮ ಚಂದ್ರಕೇತುವನ್ನು ದ್ವಂದ್ವ ಯುದ್ಧಕ್ಕೆ ಹ್ಯಾಗೆಬಿಡಲಿ ? ( ಮತ್ತ ಆಲೋಚಿಸಿ ) ಅಥವಾ ನಾವು ಇಕ್ಷ್ವಾಕುರಾಜನ ಮನೆತನದ ವೃದ್ಧಸೇವಕರಲ್ಲವೇ? ಪ್ರಸಂಗ ಬಂದಮೇಲೆ ಮಾಡತಕ್ಕದ್ದೇನದೆ ?

ಚಂದ್ರಕೇತು—( ವಿಸ್ಮಯಲಜ್ಜಾಂಭ್ರಮಯುಕ್ತನಾಗಿ ) ಛೀ ! ಛೀ ! ಎತ್ತ ನೋಡಿದರೂ ನಮ್ಮ ಪಡೆಯು ಹಿಂದಿರುಗುತ್ತದೆ !

ಸುಮಂತ್ರ—(ರಥವನ್ನು ನಿಂದಿಸಿ ನಡೆಸುತ್ತಾ) ಮಗನೇ ಚಂದ್ರಕೇತೂ, ಇಗೋ ನೋಡು, ಆ ವೀರನಿಗೂ ನಿನಗೂ ಸಂಭಾಷಣವಾಗುವಷ್ಟು ಸಮೀಪಕ್ಕೆ ತಂದೆನು. ಮಾತಾಡುವದಿದ್ದರೆ ಸಾಗಲಿ.

ಚಂದ್ರಕೇತು— (ಮರೆತವನಂತೆ ಆಗಿ) ಸುಮಂತ್ರರೇ, ಈತನನ್ನು ಮೊದಲು ಸೈನಿಕರು ಯಾವ ಹೆಸರಿನಿಂದ ಕರೆದರು ? ತಮಗೆ ಗೊತ್ತುಂಟೇ ?

ಸುಮಂತ್ರ—ಮಗನೇ, ಲವನೆಂಬ ಹೆಸರಿನಿಂದ ಕರೆದರು.

ಚಂದ್ರಕೇತುಃ—

॥ ವಂಶಸ್ಥವೃತ್ತಂ ॥

ಎಲೈ ಮಹಾಬಾಹು ಲವಪ್ರವೀರನೇ ।
ಬಲಂಗಳಂ ಕೊಂದೊಡವಾಯ್ತು ಪೌರುಷಂ ।।
ವಿಲಂಬಮೇಕೆನಯಮುಂದೆ ಬಾ ಸಖಾ ।
ವಿಲೋಪಮಂ ತೇಜದಿ ತೇಜಮೈದುಗೆ ॥ ೭ ॥

ಸುಮಂತ್ರ—ಚಂದ್ರಕೇತೂ, ನೋಡು ನೋಡು,

॥ ಮಾಲಿನಿವೃತ್ತಂ ॥

ತಿರುಗಿದನಿದೆ ನಿಂನಾಹ್ವಾನಕೀಬಾಲವೀರಂ ।
ತೊರೆದು ವಹಿಲದಿಂದಂ ಸೈನ್ಯಸಂಹಾರವನ್ನು ॥
ಕರಿಮಥನವಬಿಟ್ಟಂ ಭೋದನಿರ್ಘೋಷವಂ ಕೇ ।
ಳ್ದರದೆ ತಿರುಗುವಂತಾ ಬಾಲಕಂಠೀರವೇಂದ್ರಂ ॥ ೮ ॥

(ಬಳಿಕ ಉದ್ಧತ ಪರಾಕ್ರಮಿಯಾದ ಲವನು ಬೇಗನೆ ಮುಂದೆ ಬರುತ್ತಾನೆ.)

ಲವನು—ಶಾಬಾಸ್, ರಾಜಪುತ್ರಾ ಶಾಬಾಸ್ ! ನೀನು ಇಕ್ಷ್ವಾಕುವಂಶೋತ್ಪನ್ನನೆಂಬುದು ಸತ್ಯವು ! ಇಗೋ ನಿನ್ನ ಆಹ್ವಾಹನದಿಂದ ಬಂದಿದ್ದೇನೆ, ನೋಡು.

(ಹಿಂದೆಯಲ್ಲಿ ಬಹಳ ಕೋಲಾಹಲ ಶಬ್ದವಾಗುತ್ತದೆ.)

ಲವನು— (ಕೋಪಾವೇಶದಿಂದ ತಿರುಗಿ ನೋಡುತ್ತಾ) ಏನಿದು ? ಈ ಸೇನಾಪತಿಗಳು ನನ್ನಿಂದ ಇದೇ ಈಗ ಭಗ್ನರಾಗಿ ಹೋಗಿದ್ದರು; ಮತ್ತೆ ಈಗ ಯುದ್ಧಾಪೇಕ್ಷೆಯಿಂದ ಬಂದು ನನ್ನ ಮೇಲೆ ಶಸ್ತ್ರಪ್ರಹಾರಗಳನ್ನು ಮಾಡುತ್ತಾರೆ ! ಎಲೈ ತಿಳಿಗೇಡಿಗಳಿರಾ, ನಿಮಗೆ ಧಿಕ್ಕಾರವಿಲ್ಲಿ ?

॥ ಮತ್ತೇಭವಿಕ್ರೀಡಿತ ॥

ಪ್ರಳಯೋತ್ಪಾತಸಮೀರಸಿಂ ಕದಲಿದಂಭೋದಿ ಪ್ರವಾಹಂ ಮಹಾ ।
ಚಳಸಂಘಾಶದ ಹೊಯ್ಲಿಗೆದ್ದ ಕಡಲ್ಗಿಚ್ಚಿಂಗೊಂದುತುತ್ತಪ್ಪವೊಲ್ ॥
ಮುಳಿಯುತ್ತಂ ಕವಿದೇರುವೀಸಿಬಿಡಸೇನಾಜಾಲ ಕೋಲಾಹಲಂ ।
ಬೆಳೆವೆಂನುಗ್ರವಿರೋಷವಹ್ನಿಯುರಿವಾಂಗ್ಗೊಗೊಂಡು ತುತ್ತಾಗಲಿ ॥ ೯ ॥

( ಹೀಗೆಂದು ಸೇನೆಗೆ ಎದುರಾಗುತ್ತಾನೆ )

ಚಂದ್ರಕೇತು—ಎಲವೆಲೈ ಶೂರನೇ, ಇತ್ತನೋಡು

॥ ವಸಂತತಿಲಕ ॥

ಸ್ಥಾನಂ ಮಹಾದ್ಭುತ ಗುಣಾತಿಶಯಕ್ಕೆ ನೀನೆಂ ।
ದೀ ನನ್ನಮಿತ್ರನದರಿಂದೆಮಗಿಲ್ಲಭೇದಂ ॥
ಏನೆಂದು ಕಾದುವೆ ? ನಿಜಾಪ್ತಜನಕ್ಕಳೊಳ್ ಬಾ ।
ರೈ ನಿನ್ನದರ್ಪಕೊರೆಗಲ್ಲವನೆಂದುಕೇತು ॥ ೧೦ ॥

ಲವನು — ( ಹರ್ಷಸಂಭ್ರಮಯುಕ್ತನಾಗಿ ) ವಾಹವ್ವಾ ಈಸೂರ್ಯಕುಲದ ರಾಜಕುಮಾರನು ಚತುರನಾಗಿಯೂ ಪರಾಕ್ರಮಿಯಾಗಿಯೂ ತೋರುತ್ತಾನೆ. ಈತನ ವೀರವಾಕ್ಯಪ್ರಯೋಗವು ಪ್ರಸನ್ನವಾಗಿದ್ದರೂ ಕರ್ಕಶವಾಗಿದೆ- ಕಾರಣ ನನಗೆ ಈ ಸೈನಿಕರೊಡನೆ ಗುದ್ದಾಟದಿಂದ ಫಲವೇನು ? ಮುಂಚೆ ಈತನನ್ನು ಸನ್ಮಾನಿಸುತ್ತೇನೆ.

(ಮತ್ತೆ ಹಿಂದೆ ಕಲಕಲವಾಗುತ್ತದೆ)

ಲವನು— ( ಸಿಟ್ಟಿನಿಂದಲೂ ವೈರಾಗ್ಯದಿಂದಲೂ ) ಅಯ್ಯೋ ಇನ್ನೇನು ಮಾಡಲಿ ? ಈ ಸೈನಿಕರು ಆಗಿಂದಾಗ್ಗೆ ನನ್ನನ್ನು ಕೆಣಕುತ್ತಾರಲ್ಲ; ಈ ವೀರನ ಕೂಡ ಸಂಭಾಷಣೋತ್ಕಂಠಿತನಾದ ನನಗೆ ವಿಘ್ನವನ್ನು ತರುತ್ತಾರಲ್ಲ ?

( ಎಂದು ಮತ್ತೆ ಸೇನೆಯ ಕಡೆಗೆ ತಿರುಗುತ್ತಾನೆ )

ಚಂದ್ರಕೇತು—ಸುಮಂತ್ರರೇ, ನೋಡಿರಿ ನೋಡಿರಿ, ಇದು ನೋಡತಕ್ಕದ್ದದೆ:-

॥ ವಸಂತತಿಲಕ ॥

ಮುಂದೀಕ್ಷಿಸಂ ಕುತುಕದರ್ಪದೊಳೆಂನನೀತಂ ।
ಹಿಂದಟ್ಟುವಾಪಡೆಯಮೇಲ್ ಪಿಡಿವಂ ಧನುಸ್ಸಂ ॥

ಹೊಂದಿರ್ಪುದೀಲವನಿಗಿರ್ದಿಸಿಗೊಯ್ವವಾತ ।
ಕ್ಯಾಂದೋಲಿಪಿಂದ್ರಧನುವೊಂದಿದ ಮೇಘಶೋಭೆ ॥ ೧೧ ॥

ಸುಮಂತ್ರ—ಕಂದಾ, ನೀನೇ ಈತನನ್ನು ನೋಡುವದಕ್ಕೆ ಸಮರ್ಥನಾಗಿದ್ದೀ, ನಾವು ಆಶ್ಚರ್ಯದಲ್ಲಿ ಮುಳುಗಿ ಪರವಶರಾಗಿದ್ದೇವೆ; ಯಾವದೂ ಕಾಣುವದಿಲ್ಲ.

ಚಂದ್ರಕೇತು—ಎಲಎಲ್ಲೈ ಯುದ್ಧಾತುರರಾದ ಅರಸುಗಳಿರಾ !

॥ ಮತ್ತೇಭವಿಕ್ರೀಡಿತಂ ॥

ಇವನೋರ್ವಂ ಪದಚಾರಿ, ನೀವಗಣಿತರ್ ಶೀರಾನೆಯಶ್ವಂಗಳೇ ।
ರುವರೀತಂ ಸುಕುಮಾರಸುಂದರ ಶರೀರಂ, ನೀವತಿಪ್ರೌಢರು ॥
ಕವಚಾಚ್ಛಾದಿತಕಲ್ತೆ ನೀವಿವನೆಲ್ಲೆ ಕೃಷ್ಣಾಜಿನಂದಾಳ್ವನಿಂ ।
ತಿವನೊಳ್ ಕಾದುವ ನಿಮ್ಮ ನಮ್ಮ ವಿಷಮಾರಂಭಕ್ಕೆ ಧಿಕ್ಕಾರವೈ! ॥ ೧೨ ॥

ಲವನು — ( ತಿರಸ್ಕಾರವನ್ನು ತೋರುತ್ತಾ ) ಏನು ? ಈತನು ನನ್ನ ಮೇಲೆ ಕೃಪೆಯನ್ನು ತೋರುತ್ತಾನೇನು ? ಒಳ್ಳೇದು ( ಎಂದು ಆಲೋಚಿಸಿ ) ಆಗಲಿ, ಸುಮ್ಮನೇ ಕಾಲಹರಣವನ್ನು ಮಾಡಿಸುವ ಈ ಸೈನ್ಯವನ್ನು ಜೃಂಭಕಾಸ್ತ್ರದ ಪ್ರಯೋಗದಿಂದ ಚಿತ್ರದಂತೆ ನಿಲ್ಲಿಸಿಬಿಡುತ್ತೇನೆ.

(ಹೀಗೆಂದು ಅಸ್ತ್ರದೇವತೆಯನ್ನು ಧ್ಯಾನಿಸುತ್ತಾನೆ)

ಸುಮಂತ್ರ— ( ಭಯದಿಂದ ) ಇದೇನು ? ಒಮ್ಮಿಂದೊಮ್ಮೆ ನಮ್ಮ ಸೈನದ ಕೋಲಾಹಲವೆಲ್ಲಾ ನಿಂತುಹೋಯಿತು.

ಲವನು—ಇನ್ನುಮೇಲೆ ದಿಟ್ಟತನವನ್ನು ತೋರುವ ಈ ರಾಜಕುಮಾರನ ಸಮಾಚಾರವನ್ನು ತೆಗೆದುಕೊಳ್ಳೋಣ

ಸುಮಂತ್ರ— ( ಗಾಬರಿಯಾಗಿ ) ವತ್ಸಾ, ಈ ಹುಡುಗನು ಜೃಂಭಕಾಸ್ತ್ರವನ್ನು ಪ್ರಯೋಗಿಸಿದಂತೆ ನನಗೆ ತೋರುತ್ತದೆ.

ಚಂದ್ರಕೇತು—ಸುಮಂತ್ರರೇ! ಈ ಮಾತಿನಲ್ಲಿ ಸಂಶಯವೇತಕ್ಕೆ ?

॥ ಮತ್ತೇಭವಿಕ್ರೀಡಿತಂ ॥

ಇದೆ ಕಗ್ಗತ್ತಲೆ ಕೋಲುಮಿಂಚಿನ ಹೊಗರ್ಗಳ್ ರೌದ್ರದಿಂ ವ್ಯಾಪಿಸು ।
ತ್ತಿದೆ ಕಣ್ಣಂ ತೆರಿಸುತ್ತೆ, ಕುಕ್ಕುತಲೆ ಮುಚ್ಚುತ್ತೀವುದೈ ಕ್ಲೇಶವಂ ॥

ಇದೆ ಸಂಸ್ತ್ರಂಭಿತವಾಯ್ತು ನಮ್ಮಖಿಲಸೈನ್ಯಂ ಚಿತ್ರಪತ್ರಂಗಳಂ ।
ತಿದೆ ನೋಡೈಯಿಂದು ಜೃಂಭಕಾಸ್ತ್ರದ ಮಹಾಸತ್ವಪ್ರಭಾವಂ ದಿಟಂ ॥೧೩॥

॥ ವಾರ್ಧಿಕಷಟ್ಪದಿ ॥

ಪಾತಾಳದಲ್ಲಿಯು ಹೊದರ್ಗಳೊಳ್ ತೀವಿಕೊಂ ।
ಡಾತಮಶ್ಯಾಮಂಗಳುರಿ ಕಾಯ್ದು ಹೊಳೆಹೊಳೆವ ।
ರೀತಿಯಂತುರಿವ ಪಿಂಗಳದೀಪ್ತಿಗಳ ಜೃಂಭಕಾಸ್ತ್ರಂಗಳಾಗಸವನು ॥
ಭೀತಿಗೊಳಿಪಾಪ್ರಲಯಕಾಲದತಿ ಕರ್ಕಶದ ।
ವಾತವೇಗದೊಳೆತ್ತಲುಂ ಮುತ್ತಿದವು ಘನ ॥
ವ್ರಾತವಿದ್ಯುತ್ಪ್ರಭಾಕಪಿಲ ಕಂಧರದ ವಿಂಧ್ಯಾದ್ರಿಕೂಟಂಗಳೆಂತೆ ॥ ೧೪ ॥

ಸುಮಂತ್ರ—ಈತನಿಗೆ ಜೃಂಭಕಾಸ್ತ್ರವು ಎಲ್ಲಿಂದ ದೊರೆತಿರಬಹುದು ?

ಚಂದ್ರಕೇತು—ಭಗವಾನ್ ವಾಲ್ಮೀಕಿಗಳಿಂದ ಎಂದು ತಿಳಿಯುತ್ತೇನೆ.

ಸುಮಂತ್ರ—ಅಸ್ತ್ರಗಳ ವಿಷಯಕ್ಕೆ ಈ ಮುನಿಗಳ ವ್ಯವಸಾಯವಿಲ್ಲ; ಜೃಂಭಕಾಸ್ತ್ರದ ಸಂಬಂಧವಂತೂ ಇವರಿಗೆ ಮೊದಲೇ ಇಲ್ಲ. ಯಾಕಂದರೆ:—

॥ ವಂಶಸ್ಥವೃತ್ತ ॥

ಕೃಶಾಶ್ವಯೋಗೀಂದ್ರನ ಮಕ್ಕಳಾದಿಯೊಳ್ ।
ಕೃಶಾಶ್ವನಿಂ ಸಂದವು ಕೌಶಿಕಂಗಿವು ॥
ಪ್ರಸಂನನಾಗಿತ್ತನು ಮುಂದೆ ಕೌಶಿಕಂ ।
ಸ್ವಶಿಷ್ಯವರ್ಯಂಗೆ ರಘೂದ್ವಹಂಗಿವಂ ॥ ೧೫ ॥

ಚಂದ್ರಕೇತು—ಸತ್ವಗುಣದ ಹೆಚ್ಚುವಿಕೆಯುಳ್ಳಂಥ ಮಂತ್ರಜ್ಞರು ಈ ಅಸ್ತ್ರಗಳನ್ನು ತಾವೇ ಕಂಡುಕೊಳ್ಳಲಿಕ್ಕೆ ಸಮರ್ಥರಾಗಿರುತ್ತಾರೆಂದು ಬಲ್ಲವರು ಹೇಳುತ್ತಾರೆ.

ಸುಮಂತ್ರ—(ಕಣ್ಣೀರು ತಂದು) ಕಂದಾ, ಎಚ್ಚರದಿಂದಿರು ಇಗೋ ಆ ಶೂರನು ನಿನ್ನಕಡೆಗೆ ಹೊರಳಿದನು.

(ಕುಮಾರರು ಒಬ್ಬರಿಗೊಬ್ಬರು) ಅಹಹ ! ಈ ಬಾಲಕನು ನನ್ನ ದೃಷ್ಟಿಗೆ ಬಹಳ ಆನಂದವನ್ನು ಕೊಡುತ್ತಾನೆ.

(ಎಂದು ಪ್ರೇಮದಿಂದ ಚನ್ನಾಗಿ ನೋಡುತ್ತಾರೆ)

॥ ಮತ್ತೇಭವಿಕ್ರೀಡಿತಂ ॥

ಗುಣದುತ್ಕರ್ಷದೊಳೆನ್ನಭಕ್ತಿಯೊ, ಯದೃಚ್ಛಾಸಂಗವೋ, ಮೇಣು ಹಿಂ ।
ದಣ ನವ್ಮೊರ್ವರ ಸಖ್ಯವೋ!, ದೃಢತರಂ ಜನ್ಮಾಂತರಾಪ್ತತ್ವವೋ ॥
ಪ್ರಣಿಧಾನಂ ಮನಕಪ್ಪುದೀತನನು ಕಂಡೆನ್ನೈ ? ಇದೀಜನ್ಮದೆ ।
ತೃಣಸಂಬಂಧವೊ! ! ನಾಗೆ ದೈವಗತಿಯಿಂದಜ್ಞಾತವಾಗಿರ್ಪುದು ॥ ೧೭ ॥

ಸುಮಂತ್ರ— ಇದು ಬಹಳವಾಡಿ ಪ್ರಾಣಿಗಳ ಮನೋಧರ್ಮವೇ; ಯಾರಿಗಾದರೂ ಎಲ್ಲಿಯಾದರೂ ಆನಂದಮಯವಾದ ಪ್ರೀತಿಯುಂಟಾದರೆ ಜನರು ಅದಕ್ಕೆ ತಾರಾಮೈತ್ರಿಯೆಂತಲೂ ಚಕ್ಷೂರಾಗವೆಂತಲೂ ಅನ್ನುತ್ತಾರೆ; ಅದನ್ನೇ ಬಲ್ಲವರು ಅಭಾದಿತವಾದಂಥ ಅಕೃತ್ರಿಮಪ್ರಣಯವೆಂದು ತಿಳಿಯುತ್ತಾರೆ.

॥ ಆರ್ಯಾವೃತ್ತ ॥

ಆವುದು ಕಾರಣರಹಿತಂ ।
ಸಾವಿಲ್ಲ ಪಕ್ಷಪಾತಕೇದೇದುಂ ॥
ನೀವುದದಂತಃಕರಣಗ ।
ಳಾವಳಿಯಂ ಪ್ರೇಮತಂತುವೆಂದೆನಿಕುಂ ॥ ೧೭ ॥

( ಹುಡುಗರು ಒಬ್ಬರನ್ನೊಬ್ಬರು ನೋಡಿ ಆಂದುಕೊಳ್ಳುತ್ತಾರೆ. )

॥ ವಸಂತತಿಲಕ ॥

ಮಾಣಿಕ್ಯದಂತೆ ಹೊಳೆವೀಚೆಲುವಂಗದಲ್ಲಿ ।
ಬಾಣಂಗಳಂ ಬಿಡುವದೆಂತಿದಯೋಗ್ಯಮಲ್ತೇ ? ॥
ಕಾಣುತ್ತಲೀತನುವನಪ್ಪುವೆನೆಂದು ರೋಮ ।
ಶ್ರೇಣೀಪ್ರಹರ್ಷದೊಡನುಬ್ಬಿಹುದೆನ್ನಕಾಯಂ ॥ ೧೮ ॥

॥ ಶಾರ್ದೂಲವಿಕ್ರೀಡಿತಂ ॥

ಆದಾಗ್ಯೂ ಗತಿಯಾವುದಾಯುಧವ ನಾಣಲ್ ತೀಕ್ಷ್ಣತೇಜಸ್ವಿಯು ।
ಲ್ಲಾದಿವ್ಯಾಸ್ತ್ರಗಳಿಂದದೇಂ? ಸದೆಯುದಿರ್ದಿಂತಪ್ಪ ವೀರರ್ಕಳಂ ॥
ಕೈದನ್ನೆತ್ತಿದಿರಾಗಿರಲ್ಕೆ ತಿರುಗಲ್ಕಾನಿಂತದೇನೆಂಬನಿಂ ।
ದೀ ಧೀರಂ ರಣಕೂರರಾಚರಣೆ ರೌದ್ರಂ ಪ್ರೇಮಬಾಧಾಂತಕಂ ॥ ೧೯ ॥

ಸುಮಂತ್ರ —(ಲವನನ್ನು ದೃಷ್ಟಿಸಿ ನೋಡಿ ಕಣ್ಣುಗಳಲ್ಲಿ ನೀರು ತಂದುಕೊಂಡು ತನ್ನೊಳಗೆ )

॥ ಇಂದ್ರವಜ್ರಾ ॥

ನಿಕ್ಷಿಪ್ತಿತಾವತ್ಪ್ರಿಯವಂಶಮೂಲಬೀಜಂ ।
ಮುನ್ನಸ್ತಮಂತಾಳ್ದುದು ದೈವದಿಂದೆ ॥
ಇನ್ನೆತ್ತಣಿಂ ಪುಷ್ಪಫಲೋದ್ಗಮಂಗಳ್ ।
ಮುನ್ನಾಗಿರಲ್ ವಲ್ಲರಿ ಛಿನ್ನಮೂಲಂ ॥ ೨೦ ॥

ಚಂದ್ರಕೇತು—ಸುಮಂತ್ರರೇ ನಾನು ರಥದಿಂದಿಳಿಯುತ್ತೇನೆ.

ಸುಮಂತ್ರ—ಮಗನೇ ಯಾವ ಕಾರಣದಿಂದ?

ಚಂದ್ರಕೇತು—ಅದರಿಂದ ಈ ವೀರಪುರುಷನಿಗೆ ಸನ್ಮಾನವನ್ನು ಕೊಟ್ಟಂತೆ ಆಗುತ್ತದೆ; ಮತ್ತು ಕ್ಷತ್ರಿಯರ ಧರ್ಮವನ್ನೂ ಕಾಪಾಡಿದಂತಾಗುತ್ತದೆ; ರಥಿಕರು ಪಾದಚಾರಿಗಳ ಕೂಡ ಕಾಳಗವನ್ನು ಮಾಡಲಾಗದೆಂದು ಶಸ್ತ್ರಶಾಸ್ತ್ರಜ್ಞರು ಕಟ್ಟುಮಾಡಿದ್ದಾರೆ.

ಸುಮಂತ್ರ—(ತನ್ನೊಳಗೆ)ನನಗೆ ಎರಡೂ ಕಡೆಯಿಂದ ಸಂಕಟವು ಒದಗಿತಲ್ಲ !

॥ ಕಂದ ॥

ಎಂತಲ್ಲೆನಬೇಕಿಂನಿ ।
ನಂತಪ್ಪಂ ನ್ಯಾಯಮಾರ್ಗಸಂಪಾದನಮಂ ॥
ಎಂತೀವುದಾದೊಡಂ ಮೇಣ್ ।
ಇಂತಿಹ ಸಾಹಸದ ಕಾರ್ಯಕನುಮೋದನಮಂ ॥ ೨೧ ॥

ಚಂದ್ರಕೇತು—ನಮ್ಮ ಹಿರಿಯರೇ ಮುಂತಾದವರು ಧರ್ಮಾರ್ಥವಿಚಾರಗಳಲ್ಲಿ ಸಂಶಯ ಉಂಟಾದರೆ ದಶರಥಮಹಾರಾಜರ ಪ್ರಿಯಮಿತ್ರರೆಂದು, ತಮ್ಮನ್ನೇ ಕೇಳುತ್ತಾರೆ. ಹೀಗಿದ್ದು ಈ ಪ್ರಸಂಗದಲ್ಲಿ ಮಾತ್ರ ಆರ್ಯರು ಇಷ್ಟು ಚಿಂತಿಸುವದಕ್ಕೆ ಕಾರಣವು ಯಾವದು?

ಸುಮಂತ್ರ—ಕಂದಾ ಚಂದ್ರಕೇತೂ, ಸತ್ಯವದೆ. ನೀನು ಯಥಾರ್ಥವಾದ ಮಾತನ್ನು ಆಡುತ್ತೀ.

॥ ಆರ್ಯಾವೃತ್ತ ॥

ಇದು ಸಂಗ್ರಾಮದ ಪದ್ಧತಿ ।
ಯಿದು ಧರ್ಮಂ ಕ್ಷತ್ರಿಯರ್ಗೆ ಶಾಶ್ವತಮೈ ॥
ಇದನುಕ್ರಮಣಿಕೆ ರಘುಮ ।
ಶದ ವೀರಾಗ್ರಣಿಗಳಾಚರಣೆಗಳಿಕುಂ ॥ ೨೨ ॥

ಚಂದ್ರಕೇತು—ಹಿರಿಯರ ವಚನವು ಪ್ರಸಂಗಕ್ಕೆ ಬಹಳೇ ಯೋಗ್ಯವಾಗಿದ್ದೆ.

|| ಆರ್ಯಾವೃತ್ತ ||

ಇತಿಹಾಸಪುರಾಣಂಗಳ ।
ಮತಮುಂ, ಧರ್ಮಪ್ರಸಂಗ ಸಂಗತಿಯುಂ ॥
ತತರಘುರಾಜರ ವಂಶ ।
ಸ್ಥಿತಿಯಂ ಬಲ್ಲವರು ನೀವೆ ಸನ್ಮತಿಯಿಂ ॥ ೨೩ ॥

ಸುಮಂತ್ರ—(ಸ್ನೇಹಾಶ್ರುಗಳಿಂದ ಕೂಡಿ ಚಂದ್ರಕೇತುವನ್ನು ಅಪ್ಪಿ)

॥ ಶಾರ್ದೂಲವಿಕ್ರೀಡಿತವೃತ್ತ ॥

ಕಂದುಂಗಾದ ದಿನಂಗಳಿಂದ್ರಜಿತುವನ್ನು ಕೊಂದವಂನೆಷ್ಟೆಲ್ಲೈ ।
ಕಂದಾ ನಿನ್ನಯ ತಂದೆಗಾಡಿಸಿಹೆನೆಂಸೀಕೈಗಳಿಂದಾವನಂ ॥
ಇಂದಾಕೇದನ ಕೇದನಲ್ಲಿಯುಮದಿರ್ಕುಂ ವೀರಚಾರಿತ್ರ್ಯಮಾ ।
ನಂದಂನಂಗಿದು ಹೊಂದಿತ್ತೆ ದಶರಥೋರ್ವೀಶಾನ್ವಯಂ ಖ್ಯಾತಿಯಂ ॥ ೨೪ ॥

ಚಂದ್ರಕೇತು—(ಬಹಳ ಕಷ್ಟಿತನಾಗಿ ಪ್ರಲಾಪಿಸುತ್ತಾನೆ)

|| ವಸಂತತಿಲಕ ||

ಶ್ರೀರಾಘವೇಂದ್ರನಭಿವೃದ್ಧಿಯು ಹೋದನೀನೆಂ ।
ಮೀ ರಾಜವಂಶಕಿಹುದೆತ್ತಣದ್ದೆ ಪ್ರತಿಷ್ಠೆ ॥
ಈ ರೀತಿಯಂ ಕುದಿಯುತಿರ್ಪರು ಶೋಕದಿಂದಂ ।
ನ್ಯೆರಾಶ್ಯದಿಂದುಳಿದ ಮೂವರು ನಮ್ಮ ತಾತರ್ ॥ ೨೫ ॥

ಸುಮಂತ್ರ—ಆಹಹ!! ಚಂದ್ರಕೇತುವಿನ ವಚನಗಳು ಹೃದಯಮರ್ಮವನ್ನು ಕತ್ತರಿಸುತ್ತವೆ,

ಲವನು—(ತನ್ನೊಳಗೆ) ಇನ್ನೇನು ಮಾಡಲಿ? ನನ್ನ ಅಂತಃಕರಣದ ಭಾವನೆಗಳು ಒಂದಕ್ಕೊಂದು ಕೂಡಿಕೊಂಡವಲ್ಲ?

|| ಮತ್ತೇಭವಿಕ್ರೀಡಿತಂ ||

ದ್ವಿಜರಾಜೋದಯದಲ್ಲಿ ನೀಲಕಮಲಂ ತಾಳ್ವಂತೆ ಸಂತೋಷವಂ ।
ನಿಜನೇತ್ರಸ್ವಯಮೀತನಲ್ಲಿ ನಲಿಗುಂ ಯುದ್ಧೇಚ್ಛಲಂ ಮತ್ತಿದೇಂ ॥
ಸಕ್ಖುಣತ್ಕಾರಕಠೋರಘೋಷಗುಣಮಂ ಕೋದಂಡವಂ ಕೊಂಡುದೀ ।
ಭುಜದಂಡಂ ಬಹುಘೋರವೀರರಸದತ್ಯುದ್ರೇಕಮಂ ತೋರ್ಪುದು ॥ ೨೬ ॥

ಚಂದ್ರಕೇತು—(ರಥದಿಂದಿಳಿದು) ಸುಮಂತ್ರರೇ, ಈ ಸೂರ್ಯಕುಲೋತ್ಪನ್ನನಾದ ಚಂದ್ರಕೇತುವು ಅಭಿವಂದಿಸುತ್ತಾನೆ.

ಸುಮಂತ್ರ—ಕಂದಾ, ನಿನಗೆ ಕಲ್ಯಾಣವಾಗಲಿ.

॥ ಮಾಲಿನೀವೃತ್ತಂ ॥

ಗೆಲುವ ಕೊಡುವ ಶುದ್ಧೋದ್ಧಂಡ ತೇಜಸ್ಸಿನಿಂದೀ ।
ಯಲಿ ನಿನಗೆ ಕಕುತ್ಸ್ಥಂಗಿತ್ತವೋಲ್ ಪೂರ್ವದಲ್ಲಿ ॥
ಒಲಿದಚಲವರಾಹಂ ದೇವತಾಸಾರ್ವಭೌಮಂ ।
ಲಲಿತಶುಭಯಶಸ್ಸಪ್ಪಂತೆ ಲೋಕಂಗಳಲ್ಲಿ ॥ ೨೭ ॥

ಮಿತ್ರೌ: —

॥ ಮತ್ತೇಭವಿಕ್ರೀಡಿತಂ ॥

ಧುರದೊಳ್ ನೀಂಗತಿಹರ್ಷಮಂ ಕೊಡುಗೆ ತಾತಂ ನಿಮ್ಮ ವಂಶಕ್ಕೆ ಭಾ
ಸ್ಕರದೇವಂ; ತವತಾತವರ್ಗದ ಗುರು ಶ್ರೀಮದ್ವಶಿಷ್ಠಾಖ್ಯನುಂ ॥
ಹರಿಶಕ್ರಾಗ್ನಿ ಸುಪರ್ಣಮಾರುತರ ತೇಜಸ್ಸಿರ್ಕೆ ನಿಂಗೀಗೆ ಸ ।
ತ್ವರದಿಂ ಗೆಲ್ವನು ರಾಮಲಕ್ಷ್ಮಣಧನುರ್ಜ್ಯಾಘೋಷಸನ್ಮಂತ್ರಮುಂ ॥ ೨೮ ॥

ಲವನು—ಕೇಳೈ ಅರಸುಮಗನಾದ ಚಂದ್ರಕೇತುವೇ, ನೀನು ರಥದಲ್ಲಿದ್ದಾಗಲೇ ಬಹಳವಾಗಿ ಒಪ್ಪುತ್ತೀ. ಸಾಕು ಸಾಕು, ಈ ಅತ್ಯಾದರದಿಂದ ಪ್ರಯೋಜನವೇನು?

ಚಂದ್ರಕೇತು—ಹಾಗಾದರೆ, ಎಲೈ ಮಹಾತ್ಮನೇ ನೀನೂ ಬೇರೊಂದು ರಥವನ್ನು ಅಲಂಕರಿಸಬೇಕು.

ಲವನು—ಆರ್ಯರೇ, ಈ ರಾಜಕುಮಾರನನ್ನು ತಿರುಗಿ ರಥದಲ್ಲಿ ಕುಳ್ಳಿರಿಸಿರಿ.

ಸುಮಂತ್ರ—ಹಾಗಾದರೆ ನೀನೂ ಚಂದ್ರಕೇತುವಿನ ವಚನವನ್ನು ಮನ್ನಿಸಬೇಕು.

ಲವನು—ತಮ್ಮ ಒಡವೆಗಳನ್ನು ತಾವು ಸ್ವೀಕರಿಸುವವಕ್ಕೆ ವಿಚಾರವೇತಕ್ಕೆ? ನಾವು ಅರಣ್ಯವಾಸಿಗಳಾದುದರಿಂದ ರಥಾರೋಹಣವಿದ್ಯೆಯಲ್ಲಿ ಅನಭ್ಯಾಸಿಗಳು.

ಸುಮಂತ್ರ—ವಾಹವ್ವಾ! ಶಾಬಾಸ್ ಹುಡುಗಾ! ದರ್ಪದಿಂದ ಕೂಡಿದ ಸಾಧುಭಾಷಣಗಳನ್ನು ಹ್ಯಾಗಾಡಬೇಕೆಂಬಲ್ಲಿ ನೀನು ನಿಪುಣನಾಗಿದ್ದೀ! ಇಂಥಾ ನಿನ್ನನ್ನು ಇಕ್ಷ್ವಾಕು ಕುಲೋತ್ಪನ್ನನಾದ ರಾಮಭದ್ರನು ಕಂಡಿದ್ದರೆ ಆತನ ಹೃದಯವು ಪ್ರೇಮರಸವನ್ನು ಸುರಿಸುತ್ತಿತ್ತು.

ಲವನು—ಆರ್ಯರೇ, ಆ ರಾಜರ್ಷಿಯು ಬಹಳ ಸಜ್ಜನನೆಂದು ನಾನು ಕೇಳುತ್ತೇನೆ: (ಕುಸು ಲಜ್ಜಿತನಾಗುತ್ತಾನೆ.)

(ಶಾರ್ದೂಲವಿಕ್ರೀಡಿತಂ)

ನಾವಿಂತುದ್ಧತರಲ್ತು, ನಮ್ಮೊಳಿರದೀಧರ್ಮಾಧ್ವರದ್ವೇಷಮುಂ ।
ದಾವಂ ಸಾಧುಗುಣಂಗಳಿಂದಿಹದೊಳಾರಾಜೇಂದ್ರನಮ್ಮಸ್ನಿಸಂ ॥
ಈವಾಕ್ಯಂ ಸರಿಯಾದೊಡಂ, ಕುದುರೆಗಾವಲ್ಗಿರ್ಪರಾಭಾಷಣಂ ।
ನೋವಂ ಕ್ಷತ್ರಕುಲಾಪಮಾನಪಟುವೆನ್ನೀಚಿತ್ತದೊಳ್ತಿವಿತು ॥ ೨೯ ॥

ಚಂದ್ರಕೇತು—(ಎಳಿನಗೆಯಿಂದ) ಏನಯ್ಯಾ? ನಿನಗೆ ತಂದೆಗಳ ಪ್ರತಾಪೋತ್ಕರ್ಷದಲ್ಲಿಯೂ ರೋಷವಾಯಿತೇ?

ಲವನು—ಆಯಿತೋ, ಇಲ್ಲವೋ! ಆ ಮಾತು ಹಾಗಿರಲಿ! ನಾನು ಅನ್ನುವದೇನಂದರೆ:—ಆ ರಾಜನು ಬಹಳ ಶಾಂತನೂ ನೀತಿಮಂತನೂ ಎಂದು ನಾನು ಕೇಳಿದ್ದೇನೆ. ಕಾರಣ ಆತನು ತಾನು ಎಂದಿಗೂ ಗರ್ವಿತನಾಗುವಾತನಲ್ಲ; ಆತನ ಪ್ರಜೆಗಳಾದರೂ ಹಾಗಿರತಕ್ಕದ್ದಲ್ಲ. ಹೀಗಿದ್ದು ಆತನ ಆಶ್ರಯದ ಜನರು ಇಂಥಾ ರಾಕ್ಷಸವಾಣಿಯನ್ನು ಯಾಕೆ ನುಡಿಯುತ್ತಾರೋಳ್ಳೇದು?

ಆರ್ಯಾವೃತ್ತ

ಇದಕಲ್ಯಾಣಂ ಲೋಕೆ ।
ಕ್ಕಿದಖಿಲವೈರಾದಿಕಾರಣಂ ಪರಕೀಲು? ॥
ಮದಮತ್ತಗರ್ವಿತರ ನುಡಿ ।
ಯಿದೆ ರಣರಕ್ಕಸಿ ದಸಿಂದಪರ್ಮುನಿಗಳ್ ॥ ೩೦ ॥

ಹೀಗೆ ಕರ್ಕಶವಚನವನ್ನು ಜರಿಯುವವರೇ ಸಾಧುವಚನವನ್ನು ಹೊಗಳುತ್ತಾರೆ:—ಹ್ಯಾಗಂದರೆ,

ವಸಂತತಿಲಕ

ಹಾರೈಕೆಯಂ ಹಡೆವುದೀವುದು ಕೀರ್ತಿಯನ್ನು ।
ದಾರಿದ್ರ್ಯಮಂ ಕಳೆವುದೀಳ್ವುದುಪಾಪವನ್ನು ॥
ಶೌರ್ಯರ್ ಶುಭಂಗಳಿಗಿದೇ ಪ್ರಿಯಸತ್ಯವಾಕ್ಯಂ ।
ಸಾರುತ್ತಿಹರ್ ಸುಮತಿಗಳ್ ಸುರಧೇನುವೆಂದು ॥ ೩೧ ॥

ಸುಮಂತ್ರ—ಈ ಕುಮಾರನು ವಾಲ್ಮೀಕಿಮುನಿಗಳ ಶಿಷ್ಯನಲ್ಲವೇ? ಪರಮ ಶುದ್ಧಸ್ವಭಾವದವನಾಗಿದ್ದಾನೆ; ಮುನಿಜನ ಪದ್ಧತಿಗೆ ಯೋಗ್ಯವಾದ ಮಾತುಗಳನ್ನಾಡುತ್ತಾನೆ.

ಲವನು—ಎಲೈ ಚಂದ್ರಕೇತುವೇ, ನೀನು "ತಂದೆಗಳ ಪ್ರತಾಪೋತ್ಕರ್ಷದಲ್ಲಿಯೂ ರೋಷವಾಯಿತೇ!" ಎಂದು ನುಡಿದೆಯಲ್ಲ! ಅದರಿಂದ ನಾನು ಕೇಳುವದೇನಂದರೆ:—ಕ್ಷತ್ರಿಯರ ಧರ್ಮವು ಇಂಥವನಲ್ಲೇ ಇರತಕ್ಕದ್ದೆಂದು ನಿಯಮಿಸಲ್ಪಟ್ಟದೆಯೋ, ಹ್ಯಾಗೆ?

ಸುಮಂತ್ರ—ಎಲೈ ಇಕ್ಷ್ವಾಕುಕುಲೋತ್ಪನ್ನನಾದ ಆ ನಮ್ಮ ರಾಮರಾಜನನ್ನು ನೀನು ಅರಿಯೇ ಅರಿಯೆ! ಆದುದರಿಂದ ಹೀಗೆ ನುಡಿಯುತ್ತೀ! ಸಾಕು ಈ ಮಾತುಗಳು ದೂರಕ್ಕೆ ಹೋಗುತ್ತವೆ; ಇನ್ನು ಸಾಕು ಮಾಡು!

॥ ವಸಂತತಿಲಕ ॥

ಸೇನಾಂಗವಂ ಮಥಿಸಿ ನಿನ್ನಯ ಸತ್ವವನ್ನು ।
ನೀನಿಂದುತೋರಿದೆ; ಯಥಾರ್ಥವಿದಾದೊಡೇನ್ಕೆ? ॥
ಭೂನಾಥನೊಳ್ ಪರಶುರಾಮನಗೆಲ್ದನೊಳ್, ನೀಂ ।
ಹೀನೋಕ್ತಿಯನ್ನುಡಿವುದಿಂತಿದು ಯೋಗ್ಯಮಲ್ತೈ ॥ ೩೨ ॥

ಲವನು—[ನಗುತ್ತಾ] ಆರ್ಯರೇ, ರಾಜನು ಪರಶುರಾಮನನ್ನೂ ಗೆಲಿದಂಥವನೆಂಬದು ಯಾವದೊಡ್ಡ ಮಾತು?

॥ ಶಾಲಿನೀವೃತ್ತಂ ॥

ಕೇಳೈ ಆರ್ಪಂಟುಕ್ತಿಯಲ್ಲೇ ದ್ವಿಜರ್ಗೆ ।
ತೋಳೊಳ್ ಸತ್ವಂ ಕ್ಷತ್ರಿಯರ್ಗೆಂದು ಸಿದ್ಧಂ ॥
ತಾಳಲ್ ಕೈದಂ ಭಾರ್ಗವಂ ಬ್ರಾಹ್ಮಣಂ ಭೂ ।
ಪಾಳಂ ರಾಮಂ ಗೆಲ್ದೊಡೇನ್ಕೆ ಪ್ರಶಂಸೆ ॥ ೩೩ ॥

ಚಂದ್ರಕೇತು—[ಶಿರಸ್ಕಾರವನ್ನು ತೋರಿಸಿ] ಸುಮಂತ್ರರೇ! ಈ ಪ್ರಶ್ನೋತ್ತರಗಳಿಂದ ಪ್ರಯೋಜನವೇನು? ಸಾಕು! ಇನ್ನು ಬಿಟ್ಟುಬಿಡಿರಿ!

॥ ವಸಂತತಿಲಕ ॥

ಆರ್ಕೈ ಇವಂ? ಪೊಸಬನೀಗ ನರಾವತಾರಂ ।
ಘೋರಂ ಭೃಗೂತ್ತಮನುಮೀತಗೆ ವೀರನೆಂದು ॥
ಈರೇಳು ಲೋಕಕಭಯಪ್ರದಪುಣ್ಯತಾತ ।
ಚಾರಿತ್ರ್ಯವನ್ನೆ ಅರಿಯಂ ಕಲಿಯಾವನೀತಂ? ॥ ೩೪ ॥

ಲವನು—ಆ ರಘುನಾಥನ ಚರಿತ್ರವನ್ನೂ, ಮಹಿಮೆಯನ್ನೂ ಯಾವನು ತಿಳುಕೊಂಡಿಲ್ಲ? ಎಲ್ಲರಿಗೂ ಗೊತ್ತೇ ಅದೆ; ಈ ವಿಷಯದಲ್ಲಿ ನಾನು ತುಸು ಮಾತಾಡತಕ್ಕದ್ದದೆ; ಇಲ್ಲವೆ ಸಾಕು. ಇಂಥಾ ಪಂಚಾಯತಿಯು ನಮ್ಮಂಥ ವರಿಗೆ ಯಾತಕ್ಕೆ ಬೇಕು?

॥ ಮತ್ತೇಭವಿಕ್ರೀಡಿತಂ ॥

ಅವರಾಚಾರವದೆಂತುಮಿರ್ಕೆ ವಿಹಿತಂ ಸಜ್ಜರ್ಗವರ್ ವೃದ್ಧರ್ಕೈ ।<br>
ಭುವಿಯೊಳ್ ಪೇಗೊಳಿಗೆಯ್ದು ಖಂಡಿತಯಶಃಪಾತ್ರರ್ ಮಹಾತ್ಮರ್ಕಳು ॥<br>
ಬರುವಕ್ಕಾಂತು ಖರಂಗೆ, ಚಾಪಕವಚಾಂಗಚ್ಛೇದವಂ ತಾಳ್ದರಂ ।<br>
ಜವರಲ್ಲಿಲ್ಲಿಯುಮಿಂದ್ರಸೂನುವಧೆಯೊಳ್ ಬಿನ್ನಾಣವಂ ತೋರಿದರ್ ॥ ೩೫ ॥

ಚಂದ್ರಕೇತು—ಎಲೈ ಗುರುಜನರಿಗೆ ದೂಷಣವನ್ನು ಕೊಡುವ ಅಮರ್ಯಾದಶೀಲನೇ, ಬಹಳ ಮಾತುಗಳನ್ನಾಡುತ್ತೀ! ಜೋಕೆ, ಕಂಡಿಯಾ !

ಲವನು—ಎಲ! ಈತನು ತಿರುಗಿ ನನ್ನ ಮೇಲೆಯೇ ಹುಬ್ಬುಗಂಟಿಕ್ಕುತ್ತಾನೆ!

ಸುಮಂತ್ರ—ಓಹೋ!! ಈಗ ಇವರಿಬ್ಬರು ಸಿಟ್ಟಿಗೆದ್ದರು ನೋಡಿದಿಯಾ?

॥ ಶಾರ್ದೂಲವಿಕ್ರೀಡಿತ ॥

ಶೋಣಾಂಭೋಜದಳಂಗಳಂತಿವರವೀರೋಷಾರುಣಾಕ್ಷಿದ್ವಯಂ ।<br>
ವೇಣಸ್ಯೋನ್ಮರಣೋತ್ಸವಂ ನಡುಗಿಸುತ್ತಿರ್ಕುಂ ಶಿಖಾಬಂಧವಂ ॥<br>
ಏನಂಭೋಜದಿ ಭೃಂಗಪಂಕ್ತಿಯೊ, ಕಲಂಕಾಭಾಗವೋ ಚಂದ್ರನೋಳ್ ।<br>
ತಾನೆಂಬಂದವ ತೋರ್ಪುವೀರ್ವರಮುಖಂ ಭ್ರೂಲಾಸ್ಯಬಂಧಂಗಳಿಂ ॥ ೩೬ ॥

( ಕುಮಾರರಿಬ್ಬರು ಅನ್ಯೋನ್ಯವಾಗಿ ) ಹಾಗಾದರೆ ನಾವು ಯುದ್ಧಕ್ಕೆ ತಕ್ಕಂಥ ಭೂಮಿಗೆ ಹೋಗೋಣ ನಡಿಯಿರಿ,

( ಹೀಗೆಂದು ಎಲ್ಲರೂ ಹೊರಟು ಹೋಗುತ್ತಾರೆ. )

ಕುಮಾರವಿಕ್ರಮವೆಂಬ ೫ನೇ ಅಂಕವು

**ಸಂಪೂರ್ಣವು.**

---

# ಉತ್ತರರಾಮಚರಿತ್ರ ನಾಟಕವು.

## ೬ನೇ ಅಂಕವು.

( ಆ ಬಳಿಕ ಗಂಧರ್ವದಂಪತಿಗಳು ವಿಮಾನಾರೂಢರಾಗಿ ಬರುತ್ತಾರೆ. )

ವಿದ್ಯಾಧರನು—ಎಲ್ಲೆ ಏನಾಶ್ಚರ್ಯವಿದು ! ಈ ಸೂರ್ಯಕುಲೋತ್ಪನ್ನರಾದ ಕುಮಾರರಿಬ್ಬರು ಅಕಾಲದಲ್ಲಿ ಉಪ್ಪಂಡತನದಿಂದ ಕಾಳಗವನ್ನು ಮಾಡತೊಡಗಿದ್ದಾರೆ; ಇವರ ಪರಾಕ್ರಮವ್ಯಾಪಾರಗಳು ಕ್ಷತ್ರಿಯರ ಪ್ರತಾಪವನ್ನು ಹೊರಗೆಡಹುತ್ತಲಿವೆ; ದೇವದೈತ್ಯಾದಿಗಳಿಗೆ ಆಶ್ಚರ್ಯವನ್ನೂ, ಭಯವನ್ನೂ ಹುಟ್ಟಿಸುತ್ತಲಿವೆ।

॥ ಶಿಖರಿಣೀವೃತ್ತ ॥

ಠಣತ್ಕಾರಂ ಘೋರಂ ಜನಿಸೆ ಗುಣದಿಂದಂ; ಬಳಿಗಳಿಂ ।
ಝಣತ್ಕಾರಂ ಪೊಣ್ಮಲ್ ಘಣಘಣರವಂ ಘಂಟಿಕೆಗಳಿಂ ॥
ಪೊಣರ್ವರ್ಬಿಲ್ಲಿಂ ಕೈದುಗಳ ಚಲಜೋಡರ್ಬಿಡುವರೇ ।
ರಣಂ ತ್ರೈಲೋಕ್ಯಕ್ಕಂ ಬೆಳೆಯುತಿದೆ ರೌದ್ರಾದ್ಭುತರಸಂ ॥ ೧ ॥

॥ ವಸಂತತಿಲಕ ॥

ಅಂಭೋಧರಧ್ವನಿಯಿದೆಂದೆನೆ ಧಂಧುಮೆಂಬ ।
ಗಂಭೀರವಾದಮರದುಂದುಭಿಘೋಷಮೊತ್ತಂ ॥
ತುಂಬಿರ್ಪುದಿರ್ವರಿಗೆಯುಂ ಲವಚಂದ್ರಕೇತು ।
ವೆಂಬರ್ಭಕರ್ಗೆ ಸುಖಮಂಗಳ ಸೂಚನಾರ್ಥಂ ॥ ೨ ॥

ಆದುದರಿಂದ ಈ ಶೂರರಮೇಲೆ ಪ್ರಫುಲ್ಲಿತವಾದ ಚಲುವಹೊಂದಾವರೆಯ ಹೂವುಗಳೂ, ಮಕರಂದರಸವನ್ನು ಸುರಿಸುವ ಮಂದಾರಪಾರಿಜಾತಾದಿಗಳ ಸುಂದರವಾದ ಅರಳು ಮೊಗ್ಗೆಗಳೂ ಸುರಿಸ್ಪಡಲಿ.

ವಿದ್ಯಾಧರಿಯು—ಹೀಗಿದ್ದರೆ, ಒಮ್ಮಿಂದೊಮ್ಮೆ ಚಕಚಕನೇ ಹೊಳೆಯುವ ಚಂಚಲವಾದ ಕೋಲ್ಮಿಂಚಿನ ಪಿಂಗಲಕಾಂತಿಯಿಂದ ಆಕಾಶವೆಲ್ಲಾ ಏನು ಕಾರಣ ತುಂಬಿಹೋಯಿತು?

ವಿದ್ಯಾಧರನು—ಹೌದು, ಈ ಪೊತ್ತು ಇದೇನೋ ವಿಲಕ್ಷಣವಾಗಿ ತೋರುತ್ತದೆ.

॥ ಆರ್ಯಾವೃತ್ತ ॥

ಇದು ವಿಶ್ವಕರ್ಮಕೃತಯುಂ ।
ತ್ರಿದ ವಿಭ್ರಮಘರ್ಷಿತಾರ್ಕನಾದ್ಯುತಿಯುಂ ॥
ಹುದುಗಿಸುವ ಭಾಳನೇತ್ರಾ ।
ಭ್ಯುದಿತಂ ಜ್ವಾಲಾಕುಲಂ ಪ್ರಳಯಹರನಾ ॥ ೩ ॥

( ತುಸು ವಿಚಾರಮಾಡಿ ) ಹಾ, ತಿಳಿಯಿತು. ಕುಮಾರ ಚಂದ್ರಕೇತುವು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದ್ದಾನೆ; ಇದು ಅದರ ಉರಿಗಳ ಜಳವು, ಮತ್ತು ಈ ಕಾಲದಲ್ಲಿ:—

॥ ಮತ್ತೇಭವಿಕ್ರೀಡಿತಂ ॥

ಸಖಿನೋಡಿತ್ತ, ವಿಮಾನಮಂಡಲಿಯನೋಡುತ್ತಿರ್ಪುವಾಜ್ವಾಲೆಯಿಂ ।
ದೆ, ಕಮದ್ರಾಂತಿವೆ ಛತ್ರ ಚಾಮರಪತಾಕಂ ಚಿತ್ರವರ್ಣಂಗಳಂ ॥
ಶಿಖಿಗಳ್ ಕೇತುಗಳಂಕುಶಾಕೃತಿಯ ವಸ್ತ್ರಾಗ್ರಂಗಳೊಳ್ ಪತ್ತಿ, ನೋ ।
ಟಕೆ ವಿಭ್ರಾಂತಿಯ ಬೀರುಗುಂ ನಿಮಿಷಮಾತ್ರಂ ಕುಂಕುಮಾಲೇಪದಾ ॥ ೪ ॥

ಓಹೋ! ಅತಿಕಠಿಣವಾಗಿರುವ ವಜ್ರದ ಬಂಡೆಗಳನ್ನಾದರೂ ಒಡೆಯ ಸಮರ್ಥನಾಗಿರುವ ಈ ಭಗವಾನ್ ವೈಶ್ವಾನರನು ಸುಡಲಿಕ್ಕೇ ಆರಂಭಿಸಿದನು! ಎತ್ತೆತ್ತಲೂ ಪಸರಿಸುವ ಕಿಡಿಗಳಿಂದ ಬೆಳೆಯುತ್ತಿರುವನು. ದೊಡ್ಡ ದೊಡ್ಡ ಉರಿಗಳ ನಾಲಿಗೆಗಳು ಹತ್ತುದಿಕ್ಕುಗಳನ್ನು ಮುಟ್ಟುತ್ತಲಿವೆ. ಅದರಿಂದ ಮಹಾಭಯಂಕರನಾಗಿದ್ದಾನೆ. ಸಂತಾಪವು ಎಲ್ಲಾ ಕಡೆಯಲ್ಲಿಯೂ ಹೆಚ್ಚುತ್ತಲಿದೆ. ಆದುದರಿಂದ ಸಖಿಯನ್ನು ಮೈಯಿಂದ ಮುಚ್ಚಿಕೊಂಡು ದೂರಕ್ಕೆ ಸರಿಯುತ್ತೇನೆ. (ಹಾಗೆಮಾಡುತ್ತಾನೆ.)

ವಿದ್ಯಾಧರಿಯು—ಅಹಹ! ಬಹಳ ಆಹ್ಲಾದವಾಯಿತು! ನಿರ್ಮಲವಾದ ಮೌಕ್ತಿಕದಂತೆ ಮೃದುಶೀತಮನೋಹರವಾದ ಪ್ರಾಣಪತಿಗಳ ಈ ಗಾಢಾಲಿಂಗನದಿಂದ ನನ್ನ ಸಂತಾಪವೆಲ್ಲಾ ದೂರವಾಯಿತು, ಆನಂದದಿಂದ ಮೈಭಾರವಾಗಿ ಕಣ್ಣುಗಳು ಮುಚ್ಚಿಕೊಳ್ಳುತ್ತಲಿವೆ; ನನಗೆ ಸುಖದನಿದ್ರೆಯೇ ಬಂತೋ ಏನು? ಶಾಬಾಸ್! ಪ್ರಾಣಪ್ರಿಯರೇ, ಬಲು ಒಳ್ಳೇಕೆಲಸವನ್ನು ಮಾಡಿದಿರಿ.

ವಿದ್ಯಾಧರನು—ಸಖಿಯೇ, ಈಗ ನಾನು ಮಾಡಿದ್ದು ಆವ ದೊಡ್ಡ ಕೆಲಸವು? ಅಥವಾ:—

॥ ಆರ್ಯಾವೃತ್ತ ॥

ಏನುಂ ಮಾಡದಲೇ ಪ್ರಿಯ ।
ಠಾನೇದವ ನೀಡಿ ಮಾಣಿಪರ್ ವ್ಯಥೆಯಂ ॥
ಏನೋ ವಿಲಕ್ಷಣ ಧನಂ ।
ತಾನೆನಿಪರ್ ಪ್ರಾಣಿಗಳ್ಗೆ ವಲ್ಲಭರು ॥ ೫ ॥

ವಿದ್ಯಾಧರಿಯು—ಔವಯ್ಯಾ ಇದೇನು? ನಿರಂತರದಲ್ಲಿ ಅತಿ ಚಂಚಲವಾಗಿ ಮಿಂಚುವ ವಿದ್ಯುಲ್ಲತೆಯಿಂದ ಕೂಡಿಕೊಂಡಂಥ ಸೊಕ್ಕಿದ ಮಯೂರದ ಕಂಠದ ನೀಲವರ್ಣವುಳ್ಳಂಥ ದಟ್ಟೈಸಿದ ಮೇಘಗಳಿಂದ ಆಕಾಶವು ಒಮ್ಮಿಂದೊಮ್ಮೆ ತುಂಬಿಹೋಯಿತಲ್ಲ!

ವಿದ್ಯಾಧರನು—ವಾಹವ್ವಾ! ವಾಹವ್ವಾ! ಇದು ಕುಮಾರ ಲವನಿಂದ ಬಿಡಲ್ಪಟ್ಟ ವಾರುಣಾಸ್ತ್ರದ ಮಹಿಮೆಯಲ್ಲವೆ? ನೋಡು ನಿರಂತರವಾಗಿ ಜಲಧಾರೆಗಳು ಸುರಿದು ಆಗ್ನೇಯಾಸ್ತ್ರವು ನಂದಿಹೋಯಿತು.

ವಿದ್ಯಾಧರಿಯು—ಒಳ್ಳೇದಾಯಿತು, ನನಗೆ ಬಹಳ ಒಳ್ಳೇದಾಯ್ತು.

ವಿದ್ಯಾಧರನು—ಅಹಹ! ಅಹಹ! ಸಾಕುಸಾಕು ಯಾವದಾದರೂ ಅತಿಶಯವಾದರೆ ಬೇಸರವಾಗುತ್ತದೆ. ಯಾಕಂದರೆ—ನೋಡು, ಬಿರುಗಾಳಿಯ ಹೊಯ್ಲಿಂದ ಗಂಭೀರನಾದವನ್ನು ಮಾಡುವ ಮೋಡಗಳಿಂದ ಅಂತರಿಕ್ಷವು ತುಂಬಿಹೋಯಿತು; ಗಾಳಿಯಾಡಲಿಕ್ಕೂ ಅವಕಾಶವಿಲ್ಲ. ಕಗ್ಗತ್ತಲು ಎಲ್ಲಿನೋಡಿದರೂ ತುಂಬಿಕೊಂಡಿದೆ, ಒಮ್ಮೆಗೇ ಜಗತ್ತನ್ನು ನುಂಗಲಿಕ್ಕೆಂದು ತೆರೆಯಲ್ಪಟ್ಟ ಕಾಲಭೈರವನ ಭಯಂಕರವಾದ ಮುಖದಲ್ಲಿ ಬಿದ್ದವೊ, ಇಲ್ಲವೆ ಸಕಲ ಶರೀರದ್ವಾರಗಳನ್ನು ಕಟ್ಟಿಕೊಂಡು ಯುಗಾಂತ್ಯದಲ್ಲಿ ಯೋಗನಿದ್ರೆಯನ್ನು ಮಾಡುವ ನಾರಾಯಣನ ಹೊಟ್ಟೆಯಲ್ಲೇ ಹೊಕ್ಕವೋ, ಎಂಬಂತೆ ಜೀವಜಾಲಗಳೆಲ್ಲಾ ಥರಥರನೆ ನಡುಗುತ್ತಲಿವೆ. (ಹೀಗೆಂದು ಮತ್ತೊಂದುಕಡೆಗೆ ನೋಡಿ) ಶಾಬಾಸ್, ಕಂದಾ ಶಾಬಾಸ್! ಒಳ್ಳೇ ಯೋಗ್ಯಕಾಲದಲ್ಲಿ ವಾಯುವ್ಯಾಸ್ತ್ರವನ್ನು ಬಿಟ್ಟೆ.

॥ ಆರ್ಯಾವೃತ್ತ ॥

ವಾಯುವಿನಿಂ ಮೇಘಂಗಳ ।
ನೀಯಾಕಾಶದೊಳಡಂಗಿಸಿದೆ ಈಗಳ್ ॥
ಮಾಯಾವಿವರ್ತವಂ ವಿ ।
ದ್ಯಾಯೋಗದೆ ಬೋಧದೊಳ್ ವಿಲೋಪಿಸುವೊಲ್ ॥೬॥

ವಿದ್ಯಾಧರಿಯು—ಪ್ರಾಣನಾಥರೇ, ಇವರಾರು? ನೋಡಿರಿ, ಸಂಭ್ರಮದಿಂದ ಕಯ್ಯಲ್ಲಿ ಬೆತ್ತದ ಸಳಕೆಯನ್ನು ತಿರುವುತ್ತಾ, ದೂರದಿಂದಲೇ ಮಧುರ ಭಾಷಣದಿಂದ ಯುದ್ಧವ್ಯಾಪಾರಗಳನ್ನು ನಿಲ್ಲಿಸಿರೆನ್ನುತ್ತಾ ಈ ಕುಮಾರರಿಬ್ಬರ ನಡುವೆ ವಿಮಾನವನ್ನು ಇಳಿಸುತ್ತಲಿದ್ದಾರೆ.

ವಿದ್ಯಾಧರನು—ಈತನು ಶಂಬೂಕನನ್ನು ಸಂಹರಿಸಿ ತಿರುಗಿ ಬರುವಂಥ ಶ್ರೀರಾಮನು ನೋಡಿದಿಯಾ?

|| ವಸಂತತಿಲಕ ||

ಮಾತಂ ಮಹಾಪುರುಷನಾಡಲು ಕೇಳಿ ಶಾಂತಂ ।
ಸೀತಾಸುತಂ ತೊರೆದನಾಜಿಯ ಗೌರವಾರ್ಥಂ ॥
ತಾತಂಗೆ ಬಂದೆರಗಿನಿಂದನು ಚಂದ್ರಕೇತು ।
ಸೀತಾವರಂಗೆ ಸುತಸಂಗದಿನಿರ್ಕೆ ಸೌಖ್ಯಂ ॥ ೭ ॥

(ಹೀಗೆ ಆ ದಂಪತಿಗಳು ಹೊರಟು ಹೋಗುತ್ತಾರೆ.)

|| ಇದೇ ವಿಷ್ಕಂಭಕವು ||

(ಆ ಬಳಿಕ ರಾಮನೂ, ಲವನೂ, ನಮ್ರನಾಗಿರುವ ಚಂದ್ರಕೇತುವೂ ಬರುತ್ತಾರೆ.)

ರಾಮ—(ವಿಮಾನದಿಂದಿಳಿದವನಾಗಿ)

ಸಾವಿತ್ರಸಂತತಿಯ ಸೋಮನೆ, ಕಂದ ಬಾರೈ ।
ಬಾವೇಗದಿಂದೆ ಬಿಗಿದಪ್ಪಿಲೆ ಚಂದ್ರಕೇತೂ ॥
ಬಾವನ್ನದಂಪಿನ ತವಾವಯವಂಗಳಿಂದೆ ।
ಜೀವಾನುತಾಪವಿದು ಶಾಂತಿಯುಲೊಂದಲೆನ್ನಾ ॥ ೮ ॥

ಚಂದ್ರಕೇತು—ಅಪ್ಪಾ ನಾನು ಅಭಿವಂದಿಸುತ್ತೇನೆ.

ರಾ—(ಎಬ್ಬಿಸಿ ಪ್ರೇಮಾಶ್ರುವಿನಿಂದ ಕೂಡಿ ಆಲಿಂಗಿಸಿ) ಕಂದಾ, ದಿವ್ಯಾಸ್ತ್ರಧಾರಿಯಾದ ನಿನಗೆ ಕ್ಷೇಮವಷ್ಟೇ?

ಚಂದ್ರಕೇತು—ಅತ್ಯದ್ಭುತಪರಾಕ್ರಮಿಯಾದಂಥ ಕಣ್ಣು ಮನಸುಗಳಿಗೆ ಆನಂದವನ್ನು ಕೊಡುವಂಥ ಈ ಲವನ ಅಭ್ಯುದಯದಿಂದ ನನಗೆ ಕ್ಷೇಮವದೆ; ಆದುದರಿಂದ ಬೇಡಿಕೊಳ್ಳುವದೇನಂದರೆ—ನನ್ನನ್ನು ನೋಡಿದಂತೆಯೇ; ಅಥವಾ ನನ್ನಲ್ಲಿಗಿಂತ ಮೇಲಾದ ಕೃಪಾಕಟಾಕ್ಷಗಳಿಂದ ಈ ಮಹಾವೀರಶ್ರೇಷ್ಠನನ್ನು ತಂದೆಗಳು ನೋಡಬೇಕು.

ರಾ—(ಲವನನ್ನು ಚನ್ನಾಗಿ ನೋಡಿ) ಶಾಬಾಸ್, ಈ ನಮ್ಮ ಕಂದಯ್ಯನ ಗೆಳೆಯನು ಅತಿಕಲ್ಯಾಣಾಕೃತಿಯುಳ್ಳವನಿದ್ದಾನೆ.

॥ ಮತ್ತೇಭವಿಕ್ರೀಡಿತಂ ॥

ಇದು ಲೋಕಂಗಳ ಕಾಯುವುಕ್ಕೆದ ಧನುರ್ವೇದಾಂಗವೋ, ವೇದಘೋ ।
ಷದ ಸಂರಕ್ಷಣೆಗಾಗಿ ಜನ್ಮಿಸಿದ ಸಾಕ್ಷಾತ್ ಕ್ಷಾತ್ರಸದ್ಧರ್ಮವೋ ॥
ಇದು ಸಾಮರ್ಥ್ಯದ ರಾಶಿಯೋ, ಗುಣಗಣಕ್ಕಾಧಾರವೋ, ಬಾಲರೂ ।
ಪಿದು ಲೋಕಂಗಳ ಪುಣ್ಯ ಕರ್ಮನಿಕರಾ ಪ್ರತ್ಯಕ್ಷ್ಯಮೋ? ನೋಡುದೋ ॥ ೯ ॥

ಲವನು—(ತನ್ನೊಳಗೆ) ಅಹಾಹಾ ಈತನು ಯಾರೋ ಪುಣ್ಯಪ್ರತಾಪವುಳ್ಳ ಮಹಾಪುರುಷನಾಗಿರಬೇಕು--

॥ ಆರ್ಯಾವೃತ್ತ ॥

ಇದು ತಾಳ್ಮೆಕಂರ್ಮೆಗಳ ನೆಲೆ ।
ಯಿದು ಸದ್ವಿಶ್ವಾಸಭಕ್ತಿಗಳ ನಿಲಯಂ ॥
ಇದು ಬೆಳೆದು ಮೇಲೆನಿಸ ಧ ।
ರ್ಮದ ವೃಗೆನೊಡಲ್ಮೆ ಕಾಗೊಳಿಪ ರೂಪು ॥ ೧೦ ॥

ಮತ್ತೂ ಇವೇನು ವಿಚಿತ್ರವಾಗಿದ್ದೀತು:—

॥ ಶಾರ್ದೂಲವಿಕ್ರೀಡಿತಂ ॥

ವೈರಂ ನಾದಿತು ಶಾಂತಿಪೆರ್ಚಿತಿಹುದೀಗಾನಂದ ಸಂಪೂರಿತಂ ।
ದೂರಾಯ್ತುದ್ಧತಭಾವಮುಂ ವಿನಯವೆನ್ನಂ ಬಾಗಿಸುತ್ತಿರ್ಪುದು ॥
ಸೇರಿತ್ತೆನ್ನಯ ಚಿತ್ತವೀಮಹಿಮನೊಳ್, ಕಂಡಾಕ್ಷಣಕ್ಕೀತನಂ ।
ಚಾರಿತ್ರ್ಯಾತಿಶಯಂ ಮಹಾಂತರೊಳಗಾಧಂ ತೀರ್ಥವಮಾಹಾತ್ಮ್ಯದೊಲ್ ॥ ೧೧ ॥

ರಾ— ಏನಿದು ? ನನ್ನ ಅಂತರಂಗದಲ್ಲಿ ದುಃಖೋಪಶಾಂತಿಯೂ, ವಾತ್ಸಲ್ಯದ ಉತ್ಪತ್ತಿಯೂ ಏಕಕಾಲಕ್ಕೆ ಯಾವ ಕಾರಣದಿಂದಾಗಿರಬಹುದು? ಅಥವಾ ಹೀಗೆನ್ನುವದು ಯೋಗ್ಯವಲ್ಲೆಂದು ತೋರುತ್ತದೆ; ಯಾಕಂದರೆ, ಸ್ನೇಹಕ್ಕೆ ಹೊರಗಿನ ಕಾರಣಗಳು ಬೇಕಾಗುವದಿಲ್ಲ:—

॥ ಮತ್ತೇಭವಿಕ್ರೀಡಿತಂ ॥

ಒಳಗಿರ್ಪೊಂದುನಿಮಿತ್ತ ಪದಾರ್ಥಗಳತಾಂ ಕಟ್ಟಿಳ್ಕರಿಂ ಕಟ್ಟುಗುಂ ।
ತಿಳಿವಾತ್ರಾ ಬಹಿರಂಗಕಾರಣಗಳಂ ಪ್ರೇಮಂಗಳಾಶ್ರೈಸವು ॥
ನಳಿನಾ ಕೋಮಲಮುಷ್ಣರಶ್ಮಿಯುದಯಕ್ಕಾನಂದದಿಂ ತಾಳ್ವುದು ।
ಪ್ರಳಮಿತ್ರಾಮೃತರಶ್ಮಿಯಿಂ ದ್ರವಿಸುಗುಂ ಚಂದ್ರೋಪಲಂ ಕರ್ಕಶಂ ॥ ೧೨ ॥

ಲವನು— ಚಂದ್ರಕೇತೂ! ಇವರು ಯಾರು ?

ಚಂದ್ರಕೇತು–– ಎಲೈ ಪ್ರಿಯಮಿತ್ರನೇ, ಇವರು ನಮ್ಮ ತಂದೆಗಳಲ್ಲವೇ?

ಲವನು— ಹೀಗಿದ್ದರೆ ನನಗಾದರೂ ಹಾಗೇ ಸರಿ. ಯಾಕಂದರೆ, ನೀನು ನನಗೆ ಪ್ರಿಯಮಿತ್ರನೆಂಬ ಅಧಿಕಾರವನ್ನು ಕೊಟ್ಟೆ. ಆದರೆ ನಾಲ್ಕುಜನ ರಾಮಾಯಣಕಥಾಪುರುಷರು ನಿನ್ನ ಹಿರಿಯರಾಗಬೇಕು. ಅವರಲ್ಲಿ ಯಾರೆಂಬದನ್ನು ಸ್ಪಷ್ಟವಾಗಿ ಹೇಳು.

ಚಂದ್ರಕೇತು— ಮಿತ್ರಾ, ನಾಲ್ವರಲ್ಲಿ ಇವರು ಹಿರಿಯರೆಂದು ತಿಳಿ.

ಲವನು— ಹಾಗಾದರೆ, ಇವರು ರಘುನಾಥರೇನು ? ಬಹಳ ಸಂತೋಷವಾಯಿತು; ಈವೊತ್ತು ನಾನು ಎದ್ದಹೊತ್ತು ಒಳ್ಳೇದು; ಯಾಕಂದರೆ, ದೇವರ ಅಡಿದಾವರೆಗಳ ದರ್ಶನವಾಯಿತು. ( ಕೌತುಕದಿಂದ ದಿಟ್ಟಿಸಿ ನೋಡಿ ) ತಂದೆಗಳೇ, ವಾಲ್ಮೀಕಿಮುನಿಗಳ ಶಿಷ್ಯ ಲವನು ಅಭಿವಂದಿಸುತ್ತಾನೆ.

ರಾ— ( ಪ್ರೇಮದಿಂದ ) ಬಾ! ಆರ್ಯ ಮಗುವೇ! ಇತ್ತ ಬಾ ! ಆಯುಷ್ಯವಂತನಾಗು. ( ಎಂದು ಅಪ್ಪಿಕೊಂಡು ) ಕಂದಾ, ಸಾಕು ಸಾಕು, ಇಷ್ಟು ನಾಚಿಕೆಯಾತಕ್ಕೆ? ನನಗೆ ಬಹಳಸಾರಿ ಬಿಗಿಯಾದ ಆಲಿಂಗನವನ್ನು ಕೊಡು.

॥ ಆರ್ಯಾವೃತ್ತ ॥

ಅರಳಿದರವಿಂದಗರ್ಭದೊ ।
ಳಿರುವೆಸಳನೆ ಸ್ನಿಗ್ಧಪುಷ್ಟಮೃದುಕಠಿಣಂ ॥
ಹರುಷವನೀವುದು ಹಿಮಕರ ।
ಹರಿಚಂದನ ಶೀತಲಂ ಭವತ್ ಸ್ಪರ್ಶಂ ॥ ೧೩ ॥

ಲವನು—ನಮ್ಮಂಥವರ ಮೇಲೆ ಇಂಥಾ ಮಹಾಪುರುಷರು ಇಷ್ಟು ಅಂತಃಕರುಣವನ್ನು ಮಾಡುತ್ತಾರೆ. ಹೀಗಿರುವಲ್ಲಿ ಮೂರ್ಖನಾದ ನಾನು ಇಂಥಾ ಸ್ಥಳದಲ್ಲಿ ದ್ರೋಹವನ್ನು ಮಾಡಿದೆನು. ಆದದ್ದರಿಂದ ಶಸ್ತ್ರವನ್ನು ಕಯ್ಯಲ್ಲಿ ತಾಳಿದರೆ ಅದು ಮಹಾದ್ವೇಷವನ್ನು ಉಂಟುಮಾಡಬೇಕೆಂಬದು ಅದರ ಸ್ವಭಾವಗುಣವಾಗಿ ತೋರುತ್ತದೆ. ( ಪ್ರಕಟವಾಗಿ ) ತಂದೆಗಳೇ, ಈ ಲವನು ಅಜ್ಞಾನದಿಂದ ಮಾಡಿದ ತಪ್ಪನ್ನು ಕ್ಷಮಿಸಬೇಕು.

ರಾ— ಈ ಕಂದಯ್ಯನಿಂದ ಯಾವ ಅಪರಾಧವಾಯಿತು ?

ಚಂದ್ರಕೇತು— ಅಶ್ವರಕ್ಷಕರು ಹೊಗಳಿದ ತಂದೆಗಳಡಿಯ ಪ್ರತಾಪ ವನ್ನು ಕೇಳಿ, ಈತನು ಸಿಟ್ಟಾಗಿ ಎರಡುಗಳಿಗೆಗಳ ವರಿಗೆ ತನ್ನ ಪರಾಕ್ರಮುವನ್ನು ಒಳಿತಾಗಿ ತೋರಿಸಿದನು.

ರಾ— ಕಂದಾ ಚಂದ್ರಕೇತೂ, ಕ್ಷತ್ರಿಯರಿಗೆ ಇದೊಂದು ಅಲಂಕಾರ ವೆಂದು ನಾನು ತಿಳಿಯುತ್ತೇನೆ; ಯಾಕಂದರೆ:—

॥ ಮತ್ತೇಭವಿಕ್ರೀಡಿತಂ ॥

ಪರತೇಜೋಮದಗರ್ವಮುತ್ಕರುಷಮಂ ತೇಜಸ್ವಿತಾಂ ಸ್ಥಿರಿಸಂ ।
ಹೊರಗಿಂದಲ್ಲವಗಾಗುಣಂ, ಪ್ರಕೃತಿಸಿದ್ಧಂ ಧರ್ಮಮಾಗಿರ್ಪುದು ॥
ನಿರುತಂ ತನ್ನ ಕರಂಗಳಿಂದೆ ತಪಿಸಲ್ ದೇವಂ ದಿನಾಧೀಶನೋ ।
ಕರಿಕುಂ ಬೆಂಕಿಯು ಸೂರ್ಯಕಾಂತಮುಪಮಾನಂದಾಳಿದಂತೇತಕದು? ॥ ೧೪ ॥

ಚಂದ್ರಕೇತು— ಅಪ್ಪಯ್ಯಾ, ಸಿಟ್ಟು ಇಂಥಾ ವೀರನಿಗೆ ಒಪ್ಪುತ್ತದೆ; ಹೌದು. ಆದರೆ ಈ ಪ್ರಿಯಮಿತ್ರನಿಂದ ಬಿಡಲ್ಪಟ್ಟ ಜೃಂಭಕಾಸ್ತ್ರದಿಂದ ನಮ್ಮ ಸೈನ್ಯವೆಲ್ಲ ಎಲ್ಲಿ ನೋಡಿದರೂ ಸ್ತಂಭಿತವಾಗಿ, ಉಲುಕಾಡಲಿಕ್ಕೂ ಸಾಮರ್ಥ್ಯ ವಿಲ್ಲದಂತೆ ಆಗಿದೆ; ನೋಡಬೇಕು.

ರಾ— ( ನೋಡಿ ) ವತ್ಸಾ, ಲವಾ, ನಿನ್ನ ಅಸ್ತ್ರವನ್ನು ಉಪಸಂಹರಿಸು. ಚಂದ್ರಕೇತೂ, ನೀನಾದರೂ ಅಸ್ತ್ರಪ್ರಭಾವವನ್ನು ಸೈನ್ಯಕ್ಕೆ ತಿಳಿಸಿ ಸಮಾಧಾನ ಮಾಡು, ನಡಿ.

ಲವನು— ಹಿರಿಯರ ಅಪ್ಪಣೆ ನನಗೆ ಮಾನ್ಯವದೆ. ( ಎಂದು ಉಪಸಂಹಾರವನ್ನು ಜಪಿಸುತ್ತಾನೆ. )

ಚಂದ್ರಕೇತು— ಆಜ್ಞಾನುಸಾರವಾಗಿ ನಡೆಯುತ್ತೇನೆ. ( ಎಂದು ಹೊರಟು ಹೋಗುತ್ತಾನೆ )

ಲವನು— ದೊರೆಗಳೇ, ಅಸ್ತ್ರವು ಶಾಂತವಾಯಿತು.

ರಾ—ತಮ್ಮಾ ಲವನೆ, ಕೇಳು, ಈ ಗೂಢವಾದ ಜೃಂಭಕಾಸ್ತ್ರದ ಪ್ರಯೋಗವೂ, ಸಂಹಾರವೂ ವೇದಾನುಷ್ಠಾನದಿಂದ ದೊರೆಯತಕ್ಕವುಗಳು; ಗುರುಪರಂಪರೆಯ ಹೊರತು ಯಾರಿಗೂ ಸಿಗತಕ್ಕವುಗಳಲ್ಲ.

॥ ಮತ್ತೇಭವಿಕ್ರೀಡಿತಂ ॥

ಗುರುವರ್ಯರ್ಕಮಲಾಸನಾದಿಗಳತಿಪ್ರಾಚೀನರಾದಂ ತಪಶ್ ।
ಚರಣಂಬೆತ್ತರು ಸಾವಿರಾರುವರುಷಂ ವೇದಂಗಳಂ ರಕ್ಷಿಸಲ್ ॥

ಸ್ಫುರದಾತ್ಮೀಯತಪೋಮಯಂಗಳ ಲಸತ್ತೇಜಃಸ್ವರೂಪಂಗಳಂ ।
ನೆರೆಸಂಪಾದಿಸಿದರ್ ಮಹಾಮಹಿಮೆಯುಳ್ಳೀಜೃಂಭಕಾಸ್ತ್ರಂಗಳಂ ॥ ೧೫ ॥

ಮೊದಲು ಈ ಉಪನಿಷತ್ತಿನ ಮಂತ್ರದ ಪಾರಾಯಣವು ಭಗವಾನ್ ಕೃಶಾಶ್ವಯೋಗಿಗೆ ದೊರೆಯಿತು; ಆತನು ಸಾವಿರಾರು ವರುಷಗಳವರೆಗೆ ತನ್ನ ಸೇವೆಮಾಡುತ್ತಾ, ಶಿಷ್ಯನಾಗಿರುವ, ಕುಶಿಕಕುಲದಲ್ಲಿ ಹುಟ್ಟಿದ, ವಿಶ್ವಾಮಿತ್ರ ಮುನಿಗೆ ಹೇಳಿದನು; ಆ ಮಹಾತ್ಮನು ನನಗೆ ಉಪದೇಶಿಸಿದನು. ಇದು ಇವುಗಳ ಮುಂಚಿನ ಕ್ರಮವು. ಆದರೆ ನಿನಗೆ ಯಾವ ಪರಂಪರೆಯಿಂದ ದೊರೆತುದೆಂಬುದನ್ನು ಕೇಳುತ್ತೇನೆ.

ಲವನು—ಇವು ನಮ್ಮಿಬ್ಬರಿಗೆ ತಮ್ಮಿಂದ ತಾವೇ ಪ್ರಾಪ್ತವಾಗಿವೆ.

ರಾ—(ತನ್ನಲ್ಲಿ ಆಲೋಚಿಸಿ) ಇದು ಉತ್ಕೃಷ್ಟ ಪುಣ್ಯಫಲದ ಅಗಾಧಮಹಿಮೆಯೆಂದು ತೋರುತ್ತದೆ; ಒಳ್ಳೇದು, ದ್ವಿವಚನವನ್ನು ಏನುಕಾರಣ ಪ್ರಯೋಗಿಸಿದಿ ?

ಲವನು—ನಾವಿಬ್ಬರು ಅಣ್ಣತಮ್ಮಂದಿರು ಅವಳಿಜವಳಿಗಳಾಗಿರುತ್ತೇವೆ.

ರಾ—ಹಾಗಾದರೆ, ಇನ್ನೊಬ್ಬನೆಲ್ಲಿ ?

(ಪಡದೆಯಲ್ಲಿ ಶಬ್ದವಾಗುತದೆ) ಭಾಂಡಾಯನಾ ಭಾಂಡಾಯನಾ, ಸುದ್ದಿಯು ಸತ್ಯವೇನೋ ?

॥ ಮತ್ತೇಭವಿಕ್ರೀಡಿತಂ ॥

ಬವರಂ ಭೂಪತಿಸೈನ್ಯದೊಡನೆ ಲವಗಾಯುಷ್ಮಂತಗೆ ಸಂ ।
ಭವಿಸಿರ್ಪಂ ದಿಟವೆಂದುದೇನನುಡಿದೈ ? ಇನ್ನೊಮ್ಮೆ ಪೇಳ್ಪಿರೆಯನೇ, ॥
ಅವನೀಪಾಲಕನಾಮವಸ್ತ್ರವಿಸಲ್ಕೆ ಲೋಕಂಗಳಲ್ಲಿಂದಿಗೇ ।
ಜವದಿಂ ಕ್ಷತ್ರಿಯಶಸ್ತ್ರವಹ್ನಿಗಳವಿಂದೇ ಶಾಂತಿಯಂ ತಾಳಲಿ ॥ ೧೬ ॥

ರಾ—( ಕೇಳಿ ವಿಸ್ಮಿತನಾಗಿ ) ಶಾಬಾಸ್ !

॥ ಮಂಜುಭಾಷಿಣಿ ॥

ಇವನಾರೊ, ಮತ್ತೆ ? ಹರಿನೀಲಕಾಂತಿಯು ।
ನವಗೀವನ್ನೆ ಪುಲಕವಂ ಸ್ವಪೋಷದಿಂ ॥
ನವನೀಲನೀರದ ಗಭೀರಗರ್ಜಿತಂ ।
ಜವದಿಂ ಕದಂಬಕೆ ಮುಗುಳ್ಗಳೀವವೊಲ್ ॥ ೧೭ ॥

ಲವನು—ಈತನೇ, ಈತನೇ ನಮ್ಮಣ್ಣನು! ಭರತಮುನಿಗಳಾಶ್ರಮದಿಂದ ತಿರುಗಿ ಬಂದನು.

ರಾ—( ಕೌತುಕದಿಂದ ) ವತ್ಸಾ, ಆ ನಿಮ್ಮಣ್ಣನನ್ನು ಇಲ್ಲಿಗೇ ಕರೆಯೋ, ಬರಲಿ.

ಲವನು—ಹೌದು, ಕರೆಯುತ್ತೇನೆ. ( ಎಂದು ಹೋಗುತ್ತಾನೆ )

( ಬಳಿಕ ಕುಶನು ಬರುತ್ತಾನೆ )

ಕುಶನು—( ವಿಸ್ಮಯ-ಧೈರ್ಯ-ಹರ್ಷಗಳಿಂದ ಬಿಲ್ಲಿನ ಹೆದೆಯನ್ನು ಮೀಟುತ್ತಾ. )

॥ ಸ್ರಗ್ಧರಾವೃತ್ತಂ ॥

ಶ್ರೀಮದ್ವೈವಸ್ವತಾಖ್ಯಂ ಮನುವೆ ಮೊದಲೆನಿಪ್ಪರ್ಕವಂಶಸ್ಥರಿಂದು ।
ದ್ದಾಮಸ್ವಕ್ಷಾತ್ರತೇಜೋಗ್ನಿಯೊಳುರುಹಿದರಿಂ, ಶತ್ರುಸಂಘಾತವನ್ನು ॥
ಭೂಮೀಪಾಲರ್ಕಳಿಂದೀದ್ರುಸಿಗಭಯವನೀಗೊಟ್ಟರಿಂ ಯುದ್ಧಮಿನ್ನೀ ।
ನೀಮದ್ದಿವ್ಯಾಸ್ತ್ರತೇಜೋಜ್ವಲಗುಣಚಟುಲಂ ಚಾಪಮಾಯ್ತೀದುಧನ್ಯಂ ॥೧೪॥

( ಹೀಗೆಂದು ಸ್ವಚ್ಛಂದವಾಗಿ ಅತ್ತಿತ್ತ ತಿರುಗಾಡುತ್ತಾನೆ. )

ರಾ—ಈ ಕ್ಷತ್ರಿಯಕುಮಾರನಲ್ಲಿರುವ ಸಾಮರ್ಥ್ಯದ ಹೆಚ್ಚುವಿಕೆಯನ್ನು ಅಷ್ಟು ಇಷ್ಟೆಂದು ವರ್ಣಿಸಕೂಡದು.

॥ ವಸಂತತಿಲಕ ॥

ತ್ರೈಲೋಕ್ಯಸತ್ವವ ತೃಣಕ್ಕೆಣಿಸಿರ್ಪನೋಟಂ ।
ಕಾಲಿಕ್ಕೆ ಭೂಮಿ ಕುಸಿವುದ್ಧತಧೀರಯಾನಂ ॥
ಬಾಲತ್ವದೊಳ್ ಗಿರಿಗುರುತ್ವವನಾಳ್ವನಾರೀ ।
ಬಾಲಂ ? ಪ್ರವೀರರಸವೈದಿತೊ, ದರ್ಪಮೋ, ಮೇಣ್ ॥ ೧೫ ॥

ಲವನು—( ಕುಶನ ಹತ್ತಿರ ಹೋಗಿ ) ಅಣ್ಣಯ್ಯನಿಗೆ ಜಯಜಯಕಾರವಿರಲಿ.

ಕುಶನು—ವತ್ಸಾ, ಆಯುಷ್ಮಂತನಾಗು. ತಮ್ಮಾ, ಯುದ್ಧಯುದ್ಧವೆಂದು ನಾಲ್ಕುಕಡೆಗೆ ಸುದ್ದಿಯಾಗಿದೆ, ಏನಿದು ?

ಲವನು—ಹೌದು, ಹಾಗೆ ಏನೋ ತುಸು ನಡೆದಿತ್ತು; ಆದರೆ ಎಲೈ ಅಣ್ಣಯ್ಯಾ, ಈಗ ನಿಮ್ಮ ಉದ್ಧತತನವನ್ನು ಬಿಟ್ಟು, ವಿನಯದಿಂದ ನಡೆಕೊಳ್ಳಬೇಕಾಗಿದೆ.

ಕುಶನು—ಅದೇಕೆಹೊಳ್ಳೇದು ?

ಲವನು—ಇಲ್ಲಿ ಮಹಾನುಭಾವನಾದ ರಘುನಾಥನು ಬಂದಿದ್ದಾನೆ; ಆತನು ನಮ್ಮಮೇಲೆ ಬಹಳ ಅಕ್ಕರೆಯನ್ನು ಮಾಡುತ್ತಾನೆ; ಮತ್ತು ನಿಮ್ಮನ್ನು ನೋಡಲಿಕ್ಕೆ ತವಕಿಸುತ್ತಾನೆ; ಕಾರಣ ಅತ್ತಕಡೆಗೆ ಬರಬೇಕು.

ಕುಶನು—ರಾಮಾಯಣಕಥೆಗೆ ಮುಖ್ಯಪುರುಷನೆಂದೂ ಬ್ರಾಹ್ಮಣರನ್ನು ರಕ್ಷಿಸುವವನೆಂದೂ ಹೊಗಳಲ್ಪಡುತ್ತಾನಲ್ಲಾ ? ಆತನೇ ಏನು ?

ಲವನು—ಮತ್ತೇನು ?

ಕುಶನು—ಆ ಮಹಾತ್ಮನ ಪುಣ್ಯದರ್ಶನವನ್ನು ಎಲ್ಲರೂ ತಕ್ಕೊಳ್ಳತಕ್ಕದ್ದು ಸರಿ. ಆದರೆ ನಾನು ಅಲ್ಲಿಗೆ ಯಾವ ಬಗೆಯಿಂದ ಹೋಗತಕ್ಕದ್ದು ? ತಿಳಿಯುವದಿಲ್ಲ.

ಲವನು—ತಂದೆಗಳಿಗೆ ತಕ್ಕ ಸತ್ಕಾರವನ್ನು ಆ ಮಹಾಪುರುಷನಿ ಮಾಡತಕ್ಕದ್ದು.

ಕುಶನು—ಇಂಥಾ ಸತ್ಕಾರವನ್ನು ಯಾಕೆ ಮಾಡಬೇಕೊಳ್ಳೇದು ?

ಲವನು—ಊರ್ಮಿಳಾಕುಮಾರನಾದ ಚಂದ್ರಕೇತುವು ಬಹಳೇ ಸಜ್ಜನನು; ನನ್ನೊಡನೆ ಪ್ರಿಯಮಿತ್ರನಂತೆ ನಡೆಮಕೊಳ್ಳುತ್ತಾನೆ; ಆ ಸಂಬಂಧದಿಂದ ಈ ರಾಜರ್ಷಿಯು ನಮ್ಮ ಧರ್ಮದ ತಂದೆಯೇಸು.

ಕುಶನು—ಅಂತೂ ಕ್ಷತ್ರಿಯರ ಮುಂದೆ ನಮ್ರನಾಗುವ ಪ್ರಸಂಗವು ಈ ವೊತ್ತು ಬಂತಲ್ಲವೇ ?

ಲವನು—ಈತನು ಸಾಮಾನ್ಯಕ್ಷತ್ರಿಯನಲ್ಲ. ಈತನ ಆಕಾರವನ್ನೂ, ಸಾಮರ್ಥ್ಯವನ್ನೂ ಗಾಂಭೀರ್ಯವನ್ನೂ ನೋಡಿದರೆ ಈತನಲ್ಲಿ ಲೋಕಮಾನ್ಯವಾದ ಮಹಿಮೆಯು ಹೆಚ್ಚುವಿಕೆ ಉಂಟೆಂದು ತೋರುತ್ತದೆ. ಈ ಮಹಾಪುರುಷನ ಕಡೆಗೆ ವೊದಲು ನೆಟ್ಟಗೆ ನೋಡಿ ಮಾತಾಡು.

ಕುಶನು—[ಚನ್ನಾಗಿ ನೋಡಿ]

|| ವಸಂತತಿಲಕ ||

ಆನಂದಮಂದಿಕವಿದ್ಕೆ ಹೃದಯಕ್ಕೆ ರೂಪಂ ।
ಮೇಣಿಲ್ಲಿ ಮೂಡಿದೆ ಮಹಾಸುಕೃತಪ್ರಭಾವಂ ॥
ಏನದ್ಭುತಂ? ನಲಿವುದಿಂತಿರಲೀತನಲ್ಲಿ ।
ತಾನಾದಿಸತ್ಕವಿಮುಖೋದ್ಭವೆ ದೇವಿ ವಾಣಿ ॥ ೨೦ ॥

[ಸಮೀಪಕ್ಕೆ ಹೋಗಿ] ತಂದೆಗಳೇ, ವಾಲ್ಮೀಕಿಮುನಿಗಳ ಶಿಷ್ಯನಾದ ಕುಶನು ಅಭಿವಂದಿಸುತ್ತಾನೆ.

ರಾ—ಬಾರೈ ಆಯುಷ್ಮಂತನೇ, ಇತ್ತ ಬಾ.

|| ಆರ್ಯಾವೃತ್ತ ||

ಅಮೃತಪರಿಪೂರ್ಣಮೇಘೋ ।
ಸಮುಮುಘುರಶರೀರನಾಗಿರುವ ಶಿಶ್ವಾ ॥
ಶ್ರಮುಹಗಣಾಲಿಂಗನಸಂ ।
ಭ್ರಮುವಾತ್ಸಲ್ಯಂ ಶ್ವರುಗೊಳಿಪುದೆನ್ನಾ ॥ ೨೧ ॥

[ಎಂದು ಅಪ್ಪಿಕೊಂಡು ತನ್ನೊಳಗೇ] ಈ ಹುಡುಗನು ನನ್ನ ಅಪತ್ಯವಾಗಿರಬಹುದೇ?

|| ಶಾರ್ದೂಲವಿಕ್ರೀಡಿತವೃತ್ತ ||

ಪ್ರೀತ್ಯುತ್ಪನ್ನಶರೀರಸಾರವೆ ನಿಜಾಂಗಾಂಗಂಗಳಿಂಪೊಣ್ಮಿತೊ ।
ಪ್ರತ್ಯಕ್ಷಂ ಪೊರವಂದು ನಿಂದಿಹುದೊ, ತನ್ನಂತಸ್ಥಚೈತನ್ಯವೇ ॥
ಅತ್ಯಾನಂದದೊಳುರ್ವ್ವಿಪಂ ಕರಗಿಪಂ ಕಟ್ಟಳ್ಕರಿಂ ಚಿತ್ತಮಂ ।
ಪ್ರತ್ಯಂಗಕ್ಕಮೃತಪ್ರವಾಹದಭಿಷೇಕಂಗೈದಪಂ ತಳ್ಕೆಯಿಂ ॥ ೨೨ ॥

ಲವನು—ಆರ್ಯರೇ, ಸೂರ್ಯನು ಮಧ್ಯಾಹ್ನಕ್ಕೆ ಬಂದಿದ್ದಾನೆ, ಬಹು ಸಂತಾಪವಾಗುತ್ತದೆ, ಆದದ್ದರಿಂದ ಈ ಮರದ ನೆಳಲಿಗೆ ಈ ಆಸನದಮೇಲೆ ತಂದೆಗಳು ತುಸುಹೊತ್ತು ಕುಳ್ಳಿರಬಹುದು.

ರಾ—ಒಳ್ಳೇದು, ವತ್ಸನ ಮನಸ್ಸಿಗೆ ಬಂದಂತೆ ಯಾಕಾಗವಲ್ಲದು.

[ಎಂದು ಎಲ್ಲರೂ ಅಲ್ಲಿ ಹೋಗಿ ಕೂತುಕೊಳ್ಳುತ್ತಾರೆ]

ರಾ—[ತನ್ನ ಮನದಲ್ಲಿ]

|| ವಸಂತತಿಲಕ ||

ಈಯಿರ್ಕೆ, ಈನಡತೆ, ಕೊಡುವ, ನಿಲ್ವು, ನೋಳ್ಪೀ ।
ಳ್ವೀಯೊಂದವೀಕುಶಲವರ್ಗಿವುರಾಜಚಿಹ್ನಂ ॥
ಈಯೆನ್ನಚಿತ್ತಕಹುದಚ್ಚರಿ ಮತ್ತೆ ನೋಡಲ್ ।
ಕೀಯಿರ್ವರಲ್ಲಿರುವದ್ಭೆ ವಿನಯಸ್ವಭಾವಂ ॥ ೨೩ ॥

|| ಮಾಲಿನೀವೃತ್ತ ||

ಪ್ರಕೃತಿಯೊಡನೆ ತೋರ್ಪೀ ರಾಜಲಕ್ಷ್ಮೀವಿಲಾಸಂ ।
ಸಕಲಜನಮನೋರಮ್ಯಾಂಗವಂ ಸಿಂಗರಿಕ್ಕುಂ ॥
ಚಕಚಕಿಸುವತೇಜಂ ಸ್ವಚ್ಛಮಾಣಿಕ್ಯವನ್ನೂ ।
ಪ್ರಕಟಿಪವೊಲು ಗಂಧಂ ಫುಲ್ಲಪಂಕೇಜವನ್ನೂ ॥ ೨೪ ॥

ರಘುಕುಮಾರಕರ ಪ್ರೈಕಾಂತಿಯೂ ಈ ಹುಡುಗರಲ್ಲಿ ನನಗೆ ತೋರು ತ್ತಿವೆ.

|| ವಸಂತತಿಲಕಂ ||

ಪಾರಾವತಸ್ಫುರಿತಕಂಧರನೀಲದೇಹಂ ।
ಶೋರಂ ವೃಷೇಂದ್ರನ ಪೆಗಲ್, ನಿಡುಮೆಯ್ಯ್ವಮಾಟಂ ॥
ಧೀರಪ್ರಸನ್ನಮೃಗರಾಜನಿಗಿರ್ಷನೋಟಂ ।
ಪ್ರಾರಂಭಮಂಗಳಮೃದಂಗಗಭೀರಘೋಷಂ ॥ ೨೫ ॥

ನನ್ನಾಕಾರ ಒಂದೇ ಇವರಿಗಿರುತ್ತದೆಂಬ ಹಾಗಿಲ್ಲ :—

|| ಮಾಲಿನಿವೃತ್ತಂ ||

ಜನಕತನಯೆಯಾರೂಪಸಾದೃಶ್ಯಮುಂ ರ್ಘು ।
ಗ್ಗನೆ ಹೊಳೆವುದು ನೋಡಲ್ ಜಾಣ್ಮೆಯಿಂ ಬಾಲರಲ್ಲಿ ॥
ಇನೆಯುಳ ನವಪದ್ಮಶ್ರೀಮುಖಂ ಮತ್ತಿದೇಂ? ಲೋ ।
ಚನಯುಗಳಕೆ ತಾಂ ಪ್ರತ್ಯಕ್ಷಮಾಯ್ತೆಂಬೆನೆನ್ನಾ ॥ ೨೬ ॥

|| ವಸಂತತಿಲಕಂ ||

ಆ ಮಂಜುಕರ್ಣಯುಗಮೀಶಿಶುಗಳ್ಗದೇ ಮೇಣ್ ।
ಈಮೌಕ್ತಿಕಾಮಲರದದ್ಯುತಿಸುಂದರೋಷ್ಠಂ ॥
ಶ್ಯಾಮತ್ವದಲ್ಲಿಹುದು ಕೆಂಬೊಳಪಾದೊಡೇನ್ನೈ? ।
ಈ ಮಕ್ಕಳಕ್ಷಿಗಳ ಚಲ್ವವಳಕ್ಷಿಯಿಂತೆ ॥ ೨೭ ॥

ಇದೇ ಆ ವಾಲ್ಮೀಕಿ ಮುನಿಗಳ ತಪೋವನವು, ಇಲ್ಲೇ ಲಕ್ಷ್ಮಣನು ದೇವಿಯನ್ನು ಬಿಟ್ಟು ಹೋದನು, ಈ ಬಾಲಕರ ಆಕಾರಸೌಂದರ್ಯಗಳನ್ನು ನೋಡಿದರೆ ಈ ಪ್ರಕಾರದವು, ಮತ್ತು ಇವರಿಬ್ಬರಿಗೆ ಜೃಂಭಕಾಸ್ತ್ರಗಳು ಸ್ವತಃಸಿದ್ಧವಾಗಿವೆ; ಇವೆಲ್ಲವನ್ನೂ ಧ್ಯಾನಕ್ಕೆ ತಂದು, ವಿಚಾರಮಾಡೋಣ :— ಹಿಂದಕ್ಕೆ ಚಿತ್ರದರ್ಶನಕಾಲದಲ್ಲಿ ಈ ಅಸ್ತ್ರಗಳು ನಿಶ್ಚಯವಾಗಿ ನಿನ್ನ ಸಂತತಿಗಳನ್ನು ಆಶ್ರಯಿಸುತ್ತವೆ, ಎಂದು ನಾನು ಸೀತೆಗೆ ಹೇಳಿದ್ದೆನು; ಅದೂ ದೃಷ್ಟಾಂತವಾಯಿತು. ಇವು ಗುರೂಪದೇಶವಿಲ್ಲದೆ ಯಾರಿಗೂ ಹಿಂದಕ್ಕೆ ಸಿಕ್ಕಿಲ್ಲವೆಂದು ನನಗೆ ಚನ್ನಾಗಿ ಗೊತ್ತುಂಟು, ಹೀಗೆ ಎಲ್ಲಾ ಗುರುತುಗಳು ಕೂಡುತ್ತವೆ; ಆದರೂ ಇದೇ ನಿಜವೆಂದು ಹ್ಯಾಗೆ ನಂಬಬೇಕು? ಅಥವಾ ನನ್ನ ಹೃದಯಕ್ಕೆ ಆದ ಸುಖಾತಿಶಯವೇ ನನ್ನಲ್ಲಿ ಹೀಗೆ ಸಂಶಯವನ್ನುಂಟುಮಾಡುತ್ತದೆ.

ನನ್ನ ತರ್ಕವು ಸುಳ್ಳಲ್ಲ. ಇದಲ್ಲದೆ ನನಗೆ ನೆನಪಾಗುವದೇನಂದರೆ:— ಜಾನಕಿಗೆ ಎರಡು ಗರ್ಭಪಿಂಡಗಳಿರಬೇಕೆಂದು, ನಾನು ಹಿಂದಕ್ಕೆ ಅನುಮಾನಿಸಿಕೊಂಡಿದ್ದೆನು. ( ಕಣ್ಣುಗಳಲ್ಲಿ ನೀರು ಬರುತ್ತದೆ. )

|| ಮತ್ತೇಭವಿಕ್ರೀಡಿತಂ ||

ಇರಿಸುಂ ನಂಬಿಕೆ, ಪೆಚ್ಚಿರಲ್ ಪರಿಚಯಪ್ರಾಬಲ್ಯದಿಂದಳ್ಕರಂ, ।
ಸುರಹಸ್ಯಸ್ಥಿತಿಯಾಗಿಯುಂ, ಸಹಜಲಜ್ಜಾಶೀಲೆ ಮುಗ್ಧಾಕ್ಷಿಯು ॥
ಇರಲೇದೆನ್ನಶುಭಾಂಗಿ ಮೈದಡವುತಂ ನಾನೀರ್ತೆರಂ ಗರ್ಭಮಂ ।
ದರಿದಿರ್ದೆಂ, ಪಲಕಾಲದಿಂ ತಿಳಿದುದಾಮುಗ್ಧಾಕ್ಷಿಗೀತೇಬುದು ॥ ೨೮ ॥

ಇನ್ನು ಯಾವ ಹಂಚಿಕಿಯಿಂದ ನಾನು ಇದನ್ನು ಇವರಿಗೆ ಕೇಳಲಿ? ( ಎಂದು ಅಳುತ್ತಾನೆ. )

ಲವನು—ತಾತಾ, ಇದೇನು?

|| ಆರ್ಯಾವೃತ್ತ ||

ಮಂಜಿಂದೆ ತೊಯ್ದು ಶೋಭಿಪ ।
ಮಂಜುಲತರಪುಂಡರೀಕವೇದೆನಿಕುಂ ॥
ಸಂಜಾತಾಶ್ರುಕ್ಲಿನ್ನಂ ।
ರಂಜಿಸುವೀಲೋಕಮಂಗಳಂ ವದನಂ ॥ ೨೯ ॥

ಕುಶನು— ತಮ್ಮಾ, ಹುಚ್ಚನಂತೆ ಏನು ಕೇಳುತ್ತೀಯೋ?

|| ಶಿಖರಿಣೀವೃತ್ತ ||

ಅಳಲ್ ಶ್ರೀರಾಮಂಗೆಂತಿದು? ಬಿಡೆ ಸೀತಾರಮಣಿಯಂ
ತ್ರಿಲೋಕ್ಯಾವಾಸಂ ಪಾಳಡವಿಯಹುದೈ ನಲ್ಲಳಳಿಯಲ್
ಅಳುಂಚಂ ಕಟ್ಟಳ್ಕರ್ ಸಖಿಯೊಳಿದನಂತಂ ವಿರಹಮುಂ
ಬಳಿಕ್ಕಿನ್ನೇಂ ಕೇಳ್ವೈ ಅನವಗತರಾಮಾಯಣನವೊಲ್ ॥ ೩೦ ॥

ರಾ—( ತನ್ನೊಳಗೇ ) ಇಲ್ಲಿಗೆ ಮಾತೇ ನಿಂತುಹೋಯಿತು. ಇನ್ನು ಮೇಲೆ ಕೇಳಿ ಫಲವಿಲ್ಲ; ಎಲೈ ಸುಟ್ಟ ಹೃದಯವೇ, ಮಿತಿಮೀರಿದ ಕಕ್ಕುಲತೆಯಿಂದ ಒಮ್ಮಿಂದೊಮ್ಮೆ ನಿನಗೆ ಹೀಗೆ ವಿಕಾರವಾಯಿತೇ? ನಿನ್ನ ಮನಃಸಂತಾಪವು ಹೊರಬಿದ್ದಕಾರಣ ಅದನ್ನು ನೋಡಿ ಸಣ್ಣ ಕೂಸುಗಳೂ ಮರುಗಹತ್ತಿದವಲ್ಲಾ! ಒಳ್ಳೇದು, ಇನ್ನು ಇದನ್ನು ಮುಚ್ಚಿಕೊಳ್ಳಬೇಕು. ( ವ್ಯಕ್ತವಾಗಿ ) ಹುಡುಗರಿರಾ! ಭಗವಾನ್ ವಾಲ್ಮೀಕಿಮುನಿಗಳು ರಾಮಾಯಣವೆಂಬ ಬಹುಸರಸವಾದ

ಗ್ರಂಥವನ್ನು ಮಾಡಿರುತ್ತಾರೆ; ಅವರಲ್ಲಿ ಸೂರ್ಯವಂಶದ ಚರಿತ್ರೆಯುಂಟೆಂದು ಕೇಳುತ್ತೇನೆ. ಅಲ್ಲಿ ನನಗೆ ಹಂಬಲಿಕೆಯಿದ್ದದ್ದರಿಂದ ನಿಮ್ಮಿಂದ ಕೇಳಲಿಚ್ಛಿಸುತ್ತೇನೆ.

ಕುಶನು—ಅವನ್ನು ನಾವು ಸಂಪೂರ್ಣವಾಗಿ ಓದಿದ್ದೇವೆ; ಆದರೆ ಈಗ ಬಾಲಕಾಂಡದ ಕಡೇ ಅಧ್ಯಾಯದಲ್ಲಿರುವ ಈ ಎರಡೇ ಶ್ಲೋಕಗಳು ನೆನಸಾಗುತ್ತವೆ.

ರಾ—ಸಾಕು! ಅವನ್ನೇ ಅನ್ನು, ಕೇಳೋಣ.

ಕುಶನು - ಅಪ್ಪಣೆ ( ಎಂದು ಶ್ಲೋಕಗಳನ್ನು ಅನ್ನುತ್ತಾನೆ. )

|| ಶ್ಲೋ ||

ಪ್ರಕೃತ್ಯೈವ ಪ್ರಿಯಾ ಸೀತಾ ರಾಮಸ್ಯಾಸೀನ್ಮಹಾತ್ಮನಃ
ಪ್ರಿಯಭಾವಃ ಸತು ತಯಾ ಸ್ವಗುಣೈರೇವ ವರ್ಧಿತಃ || ೧ ||
ತಥೈವ ರಾಮಃ ಸೀತಾಯಾಃ ಪ್ರಾಣೇಭ್ಯೋಪಿ ಪ್ರಿಯೋಭವತ್ ||
ಹೃದಯಂ ತ್ವೇವ ಜಾನಾತಿ ಪ್ರೀತಿಯೋಗಂ ಪರಸ್ಪರಂ || ೨ ||

( ಇವುಗಳ ಅರ್ಥವು ).

|| ಆರ್ಯಾವೃತ್ತ ||

ರಾಮಂಗೆ ಮಹಾತ್ಮಂಗೇ ।
ಪ್ರೇಮಾಸ್ಪದೆಯೆನಿಸಿದಳ್ ಪ್ರಕೃತಿಯಿಂದೇ
ಭೂಮಿಜೆ, ಬೆಳಸಿರ್ದಳ್ ತ ।
ನ್ನಾ ಮಿಗಿದ ನೇಹಮಂ ಸ್ವಗುಣದಿಂದೇ || ೩೧ ||
ಭೂಮಿಜೆಗದೇ ಪ್ರಕಾರಂ ।
ರಾಮಂ ಪ್ರಾಣಾಧಿಕ ಪ್ರಿಯನೆನಿಸಿದಂ ||
ಈ ಮಿಗಿದವರವರ ಸು— ।
ಪ್ರೇಮದಯೋಗಕ್ಕೆ ಸಾಕ್ಷಿಮನಪೊಂದೇ || ೩೨ ||

ರಾ—ಕಷ್ಟವು! ಈ ವಚನಗಳು ಎದೆಯ ಮರ್ಮಸ್ಥಳವನ್ನು ಚುಚ್ಚುತ್ತವೆ; ಹಾ ದೇವೀ! ನಮ್ಮಿಬ್ಬರ ಪ್ರೀತಿಯು ಆ ಕಾಲಕ್ಕೆ ಹೀಗಿತ್ತಲ್ಲವೇ? ಎಲೈ, ಈ ಸಂಸಾರದ ವೃತ್ತಾಂತಗಳು ಒಮ್ಮಿಂದೊಮ್ಮೆ ವಿಪರೀತವಾಗುತ್ತವೆ; ಚಿತ್ತವನ್ನು ಚಿಂತೆಯಲ್ಲಿ ಮುಳುಗಿಸುತ್ತವೆ; ಕಡೆಯಲ್ಲಿ ಇಷ್ಟಜನರ ವಿಯೋಗದಿಂದ ಸಂತಾಪವನ್ನು ಕೊಡುತ್ತವೆ; ಇವುಗಳಿಗೆ ಧಿಕ್ಕಾರವಿರಲಿ!

॥ ಶಾರ್ದೂಲವಿಕ್ರೀಡಿತ ॥

ಎಲ್ಲುಂಟಾಪರಿತೋಷವಿಾಗ ಬೆಳೆದಿತ್ತತ್ಯಂತವಿಶ್ವಾಸದಿಂ ।
ದೆಲ್ಲೀಗಾವಿಪುಲೋತ್ಸವಂ, ದಿನದಿನಸ್ನೇಹನ್ಯಪ್ರಯತ್ನಂಗಳು ॥
ಎಲ್ಲಿರ್ಕುಂ ಸುಖವಿರ್ಕೆ ದುಃಖವಿರಲಿ ಚಿತ್ತಂಗಳಾಕೂಟಮಿಾ ।
ತೆಲ್ಲಂಪೋಗಿರಲಿರ್ಪುದೊಂತಗಲದೆನ್ನಂ ವಂಚಕಪ್ರಾಣವು ॥ ೩೩ ॥

ಅಯ್ಯೋ ಇದು ಎಂಥ ದುಃಖವಪ್ಪಾ !!

॥ ವಸಂತತಿಲಕ ॥

ಸೀತಾ ಲಸದ್ಗುಣ ಸಹಸ್ರಗಳಾಪ್ರಕಾಶ ।
ಖ್ಯಾತಿ ಪ್ರದರ್ಶಕವುದಾದುದು ಪೂರ್ವಕಾಲಂ ॥
ಚೇತೋವಿಷಾದಕರವೈ ಸ್ಮರಿಸಲ್ಕದನ್ನೀ ।
ಈತಂಗಳೇಂ? ನೆನೆಯುವಂದಿದರೆಮ್ಮನೀಗಳ್ ॥ ೩೪ ॥

॥ ವಸಂತತಿಲಕ ॥

ಆಗಾಮೃಗಾಕ್ಷಿಯ ಕುಚಂಗಳು ಕೊಂಚಕೊಂಚಂ ।
ಮೈಗಾಣುತಾಳ್ದ ವಿನಿಕೇಳ್ಗಿಯು ಮುಂದೆ ಮುಂದೆ ॥
ಕೈಗಣ್ಮೆ ಯೌವನವು, ಕೂರ್ಮೆ, ಮನೋವಿಕಾರಂ ।
ಭೋಗೇಚ್ಛೆಯಲ್ಲಿ ನೆಲೆಗೊಂಡನು ಚಿತ್ತಜಾತಂ ॥ ೩೫ ॥

॥ ಆರ್ಯಾವೃತ್ತ ॥

ಪ್ರೌಢವ್ಯಾಪಾರಂ ನಲಿ ।
ದಾಡುವನಾಗೋದ್ಭವಂ ಹೃದಯದಲ್ಲಿ ॥
ಗೂಢಾ ತದ್—ವ್ಯವಹಾರಂ ।
ವ್ರೀಡಾಚ್ಛನ್ನಂ ಮನೋಹರಂ ಮೆಯ್ಯೊಳ್ ॥ ೩೬ ॥

ಕುಶನು—ಚಿತ್ರಕೂಟಗಿರಿಯಿಂದ ಹರಿಯುವ ಮಂದಾಕಿನೀತೀರದ ವನವಿಹಾರದಲ್ಲಿ ಸೀತಾದೇವಿಯನ್ನು ಕುರಿತು, ರಘುಪತಿಯು ಹೇಳಿದ ಶ್ಲೋಕವು ಇದೇ:—

॥ ಶ್ಲೋ ॥

ಶ್ವೇದರ್ಥಮಿವ ವಿನ್ಯಸ್ತಃ ಶಿಲಾಪಾದೋಯಮಗ್ರತಃ ।
ಯಸ್ಯಾಯಮಭಿತಃ ಪುಷ್ಪೈಃ ಪ್ರವೃಷ್ಟ ಇವಕೇಸರಃ ॥ ೧ ॥

( ಇದರರ್ಥವು )

॥ ಆರ್ಯಾವೃತ್ತ ॥

ಈ ಪಾಸುಗಲ್ ನಿನಗೆನಲ್ ।
ಸ್ಥಾಪಿತಮಾಗಿರ್ಪುದಲ್ಲಿ ಮುಂದೆಸೆಯೊಳ್ ॥
ಈ ಪೂತಿಹ ಕೇಸರತರು ।
ವೀಪುಷ್ಪಾವಳಿಯ ಸಾಸಿಹುದು ಸುತ್ತಲ್ ॥ ೩೭ ॥

ರಾ—( ಲಜ್ಜಾಪ್ರೀತಿಕಾರುಣ್ಯಗಳಿಂದ ಕೂಡಿ ತನ್ನೊಳಗೆ ) ಈ ಹುಡುಗನು ಬಹಳೇ ಹುಚ್ಚನಿದ್ದಾನೆ; ವಿಶೇಷವಾಗಿ ಅರಣ್ಯವಾಸಿಯು- ಆದದ್ದರಿಂದ ಯಾವ ಕಾಲಕ್ಕೆ ಯಾವ ಮಾತನಾಡಬೇಕೆಂಬದನ್ನು ತಿಳಿದವನಲ್ಲ. ಹಾ ದೇವೀ ಸೀತೇ, ಆ ಸಮಯವೂ, ಆ ಪ್ರದೇಶಗಳೂ, ನಿಮ್ಮ ಧ್ಯಾನದಲ್ಲಿಯಾದರೂ ಉಂಟೇ; ಅಯ್ಯೋ ವಿಧಿಯೇ !

॥ ಮಾಲಿನೀವೃತ್ತ ॥

ಸುಳಿಯೆ ಸುಳಿಯೆಲರ್ ಮಂದಾಕಿನೀತೀರದಿಂಬಂ ।
ದಳಿಕದೊಳೊಲಿದಾಡುತ್ತಿರ್ದವಾ ಮುಂಗುರುಳ್ಗಳ್ ।
ಬಳಲಿ ಬಿಸಿಲಿಸಿಂದಂ ತೋಯ್ದು ಘರ್ಮಾಂಬುವಿಂದಂ ।
ತಿಲಕದೆಸೆವ ಕಾಶ್ಮೀರಂ ಕರಂ ಪೋಗಿರಲ್ಕೆ ॥ ೩೮ ॥

॥ ಮತ್ತೇಭವಿಕ್ರೀಡಿತಂ ॥

ಅಕಲಂಕಾರ್ಧಮೃಗಾಂಕನಂತೆಸೆದುದಾ ರಮ್ಯಂ ಲಲಾಟಸ್ಥಳಂ ।
ಮಕರೀಚಿತ್ರಕವಿಲ್ಲದಿರ್ದು ಚಲುವಂ ನುಣ್ಗಲ್ಲಗಳ್ ತಾಳ್ದವು ॥
ಪ್ರಕಟಾಲಂಕೃತಿಯಿಲ್ಲದೇ ಶ್ರುತಿಯುಗಂ ಸೌಂದರ್ಯಮಂ ಬೀರ್ದುದು ।
ಸಖಿಯಿಂತೊಪ್ಪಿದ ಚಲ್ವಿನಾರಸಿಮೊಗಂ ಕಣ್ಮುಂದೆ ಕಟ್ಟಿರ್ಪುದು ॥ ೩೯ ॥

( ಕ್ಷಣಮಾತ್ರ ಸುಮ್ಮನೇ ಇದ್ದು ಬಳಿಕ ಕರುಣದಿಂದ ಕರಗಿ ) ಅಯ್ಯೋ ಏನು ಹೇಳಲಿ?

॥ ಶಾರ್ದೂಲವಿಕ್ರೀಡಿತಂ ॥

ಮುದೇ ನೀರೆಯುಮೂಕಿ ನಿದಿಹುದಜಸ್ರಂ ಧ್ಯಾನಿಸಿ ಧ್ಯಾನಿಸಿ ।
ಬಾದಾನಾದವನೀಯರೆನಗೆಲಿಯುಂ ಪ್ರೀತ್ಯಾಸ್ಪದರ್ ಚಿತ್ರದೊಳ್ ॥
ಮುಂದೀಲೋಕವು ಪಾಳರಣ್ಯವುಹುದೈ ಸಂಕಲ್ಪಿತಂ ಶಾಂತಿಯುಂ ।
ಪೊವಲ್ ಗೊಪ್ಪರದಗ್ನಿಯಲ್ಲಿ ಹೃದಯಂ ಬೆಂದುತೆ ಕಲಯ್ಸೀರ್ವುದು ॥ ೪೦ ॥

(ಇಷ್ಟರಲ್ಲಿ ಹಿಂದೆ ಶಬ್ದವಾಗುತ್ತದೆ.)

॥ ಮಹಾಸ್ರಗ್ಧರಾವೃತ್ತ ॥

ಜನಕಂ ವಾಲ್ಮೀಕಿ, ಮತ್ತಂ ದಶರಥನ ವಧೂಟೀಜನಂಗಳ್, ಸಭಾರ್ಯಂ ।
ಮುನಿನಾಥಂ ಶ್ರೀವಶಿಷ್ಠಂ ಶಿಶುಕಲಹವ ಕೇಳ್ದಂಜುತಂಜುತ್ತ ಮೇಳ್ದು ॥
ರಣರಂಗಕ್ಕಾಕ್ರಮಂ ದೂರದೊಳಿರುವದರಿಂ, ಮುಪ್ಪಿನಂಗಾಂಗದಿಂದಂ ।
ದಣಿದುಂಗುಂ ಭಾರವಾಗಲ್; ತ್ವರಿತಹೃದಯರುಂ ಬರ್ಪರೊಯ್ಯೊಯ್ಯನೀಗಳ್ ॥೪೧॥

ರಾ—ಏನಿದು? ಭಗವಾನ್‌ವಶಿಷ್ಠ ಗುರುಗಳೂ, ಅರುಂಧತಿಯೂ ವಾಲ್ಮೀಕಿಯೂ, ತಾಯಂದಿರೂ, ಒಮ್ಮಿಂದೊಮ್ಮೆ ಇಲ್ಲೇ ಬಂದರು. ಮಾವನಾದ ಜನಕ ಮಹಾರಾಜನೂ ಈಗಲೇ ಬರುತ್ತಾನಲ್ಲ? ಹ್ಯಾಗೆ ಇವರಿಗೆ ಮೋರೆಯನ್ನು ತೋರಿಸಲಿ! (ಕಾಣ್ಣಾದಿಂದ) ದೈವಯೋಗದಿಂದ ಮಾವಂದಿರೂ ಇಲ್ಲಿಗೆ ಬಂದರೆಂದು ಕೇಳಿದಾಗಿನಿಂದಂತೂ ನನ್ನ ದುರ್ಭಾಗ್ಯದ ಮೇಲೆ ಸಿಡಿಲೇ ಬಿದ್ದಂತಾಯಿತು:—

॥ ವಿಬುಧಪ್ರಿಯಾವೃತ್ತ ॥

ಕಡು ಪುತ್ರವಿವಾಹಮಂಗಳದುತ್ಸವಂಗಳ ಹಿಗ್ಗಿಕ್ಕೆ ॥
ಕೊಡಲಾಪ್ತತೆಯನ್ನು ತಂದೆಗಳಾಸಮಾಗಮದಂದಕೆ ॥
ಮೊಡೆದೂಗಿ ವಶಿಷ್ಠ ಕೌಶಿಕ ಮುಖ್ಯರಾದ ಮಹರ್ಷಿಗಳ್ ।
ಹೊಡಬಾಂಧವರುದು ತಾಳ್ದ ರತಿಪ್ರಮೋದವನಳ್ಕರಿ ॥ ೪೨ ॥

॥ ವಸಂತತಿಲಕ ॥

ಇಂತುತ್ಸವಂ ಬಡೆದ ತಂದೆಯು ಮಿತ್ರನಸ್ಸೀ ।
ಸಂತಾಪದಲ್ಲಿರಿಸಿ ಮತ್ತೆಯು ನೋಳ್ಪೆನಯ್ಯೋ ॥
ಎಂತಾಗದೆನ್ನತನು ಸಾಸಿರ ಸೀಳಿದೀಗಳ್ ।
ಕಾಂತಾರವಾಸಿ ಕಲಿರಾಮನಿಗೇನಶಕ್ಯಂ ॥ ೪೩ ॥

( ಹಿಂದೆ ಶಬ್ದವಾಗುತ್ತದೆ ) ಅಕ್ಕಟಕ್ಕಟಾ!! ಬಹಳ ಅನರ್ಥವಾಯಿತು:—

॥ ಮತ್ತೇಭವಿಕ್ರೀಡಿತಂ ॥

ನವಪಾಲಪ್ರಭೆಯೊಂದೆ ತೋರ್ಪುದಳಿದಾಸರ್ವಾಂಗ ಸೌಂದರ್ಯಮಿಂ ।
ತಿರುವೀಶ್ರೀರಘುನಾಥನಂ ಜನಕನೊಮ್ಮಿಂದೊಮ್ಮೆ ಕಾಣುತ್ತಲೇ ॥
ಮರೆದು ಮೋಹಸಮುದ್ರದಲ್ಲಿ ತನುಮಂ ಮತ್ತೆಚ್ಚರಂ ದಾಳ್ವಿನಂ ।
ಮರುಗುತ್ತಂ ಬೆರಗಾಗಿ ತಾಯ್ಗಳಳಲಿಂದಂ ಮೂರ್ಛೆಯಂ ತಾಳ್ದಪರ್ ॥ ೬೪ ॥

ರಾ—ಹಾ ತಂದೇ ಜನಕಮಹಾರಾಜಾ! ಹಾ ತಾಯಿಗಳಿರಾ, ನನ್ನಮೇಲೆ ನಿಮ್ಮ ಈ ಕಾರುಣ್ಯವು ಯೋಗ್ಯವಲ್ಲ:—

॥ ಆರ್ಯಾವೃತ್ತ ॥

ಜನಕರಘುಸತ್ಕುಲಂಗಳ ।
ಘನಮಂಗಳಮೂರ್ತಿಯಲ್ಲಿ ಸಖಿಯಲ್ಲಿ ॥
ಮುಳಿದೆನ್ನೊಳು ದುಷ್ಕರ್ಮಿಯೊ ।
ಅನುಕಂಪೆಯ ನೀವು ತಾಳ್ವದಿದು ವ್ಯರ್ಥಂ ॥ ೬೫ ॥

ಆಗಲಿ! ಇವರ ದರ್ಶನವನ್ನಂತೂ ತಕ್ಕೊಳ್ಳಲಿಕ್ಕೇ ಬೇಕಷ್ಟೇ?(ಎಂದು ಎದ್ದು ನಿಲ್ಲುತ್ತಾನೆ).

ಕುಶಲವರು—ತಾತಾ, ಇತ್ತಕಡೆಗೆ ಈ ಮಾರ್ಗದಿಂದ ಬರಬೇಕು.
( ಹೀಗೆ ಎಲ್ಲರೂ ಹೊರಟುಹೋಗುತ್ತಾರೆ )

ಕುಮಾರಪ್ರತ್ಯಭಿಜ್ಞವೆಂಬ ೬ನೇ ಅಂಕವು
ಸಂಪೂರ್ಣವಾಯಿತು.



# ೭ನೇ ಅಂಕವು.

( ಆಬಳಿಕ ಲಕ್ಷ್ಮಣನು ಬರುತ್ತಾನೆ )

ಲಕ್ಷ್ಮಣ--ಶಾಬಾಸ್! ಈ ಹೊತ್ತು ಭಗವಾನ್‌ವಾಲ್ಮೀಕಿ ಮುನಿಗಳು ನಮ್ಮ ನಗರದಲ್ಲಿಯೂ, ದೇಶದಲ್ಲಿಯೂ ಇರುವ ಸಕಲ ಪ್ರಜೆಗಳನ್ನು ತಮ್ಮೊಡನೆ ಕರಕೊಂಡು ಬಂದಿದ್ದಾರೆ; ಮತ್ತು ತಮ್ಮ ತಪೋಬಲದಿಂದ ದೇವತೆಗಳು, ದಾನವರು, ಮುನಿಗಳು, ಗಂಧರ್ವರು, ಪಕ್ಷಿನಾಯಕರು, ಸರ್ಪನಾಯಕರು ಮುಂತಾದ ಸ್ಥಾವರಜಂಗಮಾತ್ಮಕ ಪ್ರಾಣಿಗಳನ್ನು ಕೂಡಿಸಿದ್ದಾರೆ; ಹಾಗು ನಾನಾದರೂ ಶ್ರೀರಾಮನಿಂದ “ ತಮ್ಮಾ ಲಕ್ಷ್ಮಣಾ, ಮಹಾನುಭಾವ ವಾಲ್ಮೀಕಿ ಮುನಿಗಳು ತಮ್ಮಿಂದ ರಚಿಸಲ್ಪಟ್ಟ ನಾಟಕವನ್ನು ಅಪ್ಸರರಿಂದ ಪ್ರಯೋಗ ಮಾಡಿಸಿ ತೋರಿಸತಕ್ಕವರಿದ್ದಾರೆ; ಅದನ್ನು ನೋಡಲಿಕ್ಕೆ ನಮ್ಮೆಲ್ಲರಿಗೂ ಆಮಂತ್ರಣವನ್ನು ಕೊಟ್ಟಿರುತ್ತಾರೆ; ಆದದ್ದರಿಂದ ನೀನು ಗಂಗಾತೀರದಲ್ಲಿರುವ ನಾಟ್ಯಮಂಟಪಕ್ಕೆ ಹೋಗಿ ಎಲ್ಲರಿಗೂ ಕೂಡ್ರುವದಕ್ಕೆ ತಕ್ಕ ಸ್ಥಳಗಳನ್ನೂ ಆಸನಗಳನ್ನೂ ಸಿದ್ಧಮಾಡು ” ಎಂದು ಆಜ್ಞಾಪಿಸಲ್ಪಟ್ಟಿರುತ್ತೇನೆ. ಅದೇ ಮೇರೆಗೆ ನಾನು ದೇವತೆಗಳು, ಮನುಷ್ಯರು ಮುಂತಾದ ಯಾವತ್ತರಿಗೂ ಕೂಡ್ರತಕ್ಕ ಸಿದ್ಧತೆಗಳನ್ನು ಮಾಡಿದೆನು, ಇನ್ನು ಶ್ರೀರಾಮನು ಬರುವದೊಂದೇ ಉಳಿದದೆ. ಎಲ್ಲರೂ ಅದೇ ಸಮಯವನ್ನು ಕಾದಿರುತ್ತಾರೆ. ( ಮಾರ್ಗದ ಕಡೆಗೆ ನೋಡಿ) ಅಗೋ ಅಣ್ಣಯ್ಯನು ಬಂದನು:—

॥ ವಸಂತತಿಲಕಂ ॥

ಭೂಕಾಂತಪಟ್ಟದ ಸುಖಾನುಭವಂಗಳಿರ್ದುಂ ।
ಕೈಕೊಂಡಿಹಂ ಮುನಿಯು ಕಷ್ಟವ್ರತಂಗಳನ್ನು ॥
ಈ ಕಾಲಕಾಧಿಕವಿಯಂ ಬಹುಮಾನಿಸಲ್ಕೆ ।
ಕಾಕುತ್ಸ್ಥನಿತ್ತ ನಡೆತಂದಪನಣ್ಣ ದೇವಂ ॥ ೧ ॥

( ಅನಂತರದಲ್ಲಿ ರಾಮಚಂದ್ರನು ಬರುತ್ತಾನೆ ).

ರಾ—ಅಪ್ಪಾ ಲಕ್ಷ್ಮಣಾ, ನೋಡತಕ್ಕವರೆಲ್ಲರೂ ನಾಟಕರಂಗದಲ್ಲಿ ತಮ್ಮ ತಮ್ಮ ಸ್ಥಾನದಲ್ಲಿ ಕುಳಿತಿದ್ದಾರಷ್ಟೇ?

ಲಕ್ಷ್ಮಣ—ಹೌದು, ಕುಳಿತಿದ್ದಾರೆ.

ರಾ—ಈ ಕುಶಲವರನ್ನು ನಮ್ಮ ಚಂದ್ರಕೇತುವಿನ ಜೊತೆಯಲ್ಲೇ ಕೂಡ್ರಿಸತಕ್ಕದ್ದು; ತಿಳಿಯಿತೇ?

ಲಕ್ಷ್ಮಣ—ಪ್ರಭುಗಳ ಅಕ್ಕರೆಯು ಅವರಲ್ಲಿ ಮಿಗಿಲೆಂದು ತಿಳಿದು ಹಾಗೇ ಮಾಡಿದ್ದೇನೆ; ಇಲ್ಲಿ ಈ ರಾಜಾಸನವು ಮಂಡಿತವಾಗಿದೆ; ತಾವು ಕೂಡ್ರಬೇಕು.

ರಾ—ಒಳ್ಳೇದು. ( ಎಂದು ಆಸನದಲ್ಲಿ ಕೂಡ್ರುತ್ತಾನೆ )

( ಎಲ್ಲರೂ ತಮ್ಮ ತಮ್ಮ ಸ್ಥಳದಲ್ಲಿ ಕೂತುಕೊಳ್ಳುತ್ತಾರೆ )

ರಾ— ಎಲೈ, ಇನ್ನು ನಿಮ್ಮ ನಾಟಕವು ಸಾಗಲಿ.

(ಬಳಿಕ ಸೂತ್ರಧಾರನು ಬರುತ್ತಾನೆ.)

ಸೂತ್ರಧಾರಕ—ಎಲ ಎಲೈ! ಸತ್ಯಾರ್ಥವನ್ನು ಪ್ರಕಟಿಸುವಂಥ ಭಗವಾನ್ ವಾಲ್ಮೀಕಿ ಮುನಿಗಳು ಸಕಲ ಸ್ಥಾವರಜಂಗಮಾತ್ಮಕವಾದ ಜಗತ್ತಿಗೆ ಆಜ್ಞಾಪಿಸುವವನ್ನು ಕೇಳಿರಿ:—ಜ್ಞಾನದೃಷ್ಟಿಯಿಂದ ಚೆನ್ನಾಗಿ ತಿಳಿದುನೋಡಿ ಪಾವನಕರುಣಾದ್ಭುತರಸಮಯವಾದ ಯಾವ ಈ ನಾಟಕವು ನಮ್ಮಿಂದ ವಿರಚಿತವಾಯಿತೋ, ಅದರಕಡೆಗೆ ಕಾರ್ಯಗೌರವವಿರುವದರಿಂದ ಎಲ್ಲರೂ ಲಕ್ಷ್ಯಕೊಡಬೇಕು.

ರಾ— ಈ ಮಾತುಗಳ ಅಭಿಪ್ರಾಯವೇನಂದರೆ:— ಧರ್ಮವನ್ನು ಪ್ರತ್ಯಕ್ಷವಾಗಿ ಕಾಣುವ ಋಷಿಗಳ ವಚನಗಳು ಅಮೃತದಂತೆ ಮಧುರವಾದವುಗಳು, ಅವರ ಜ್ಞಾನವು ಶುದ್ಧ ಸತ್ವಗುಣಮಯವಾದದ್ದು. ಆದದ್ದರಿಂದ ಅಂಥವರ ಪ್ರಬಂಧವು ಎಲ್ಲಿಯಾದರೂ ಅಸತ್ಯವಾದೀತೆಂದು ಸಂಶಯವನ್ನು ತಕ್ಕೊಳ್ಳಲಾಗದು.

( ತೆರೆಯ ಒಳಗಿಂದ ಶಬ್ದವಾಗುತ್ತದೆ )

ಹಾ!— ಪ್ರಾಣನಾಥಾ ಹಾ ಕುಮಾರ ಲಕ್ಷ್ಮಣಾ ! ಈ ದಿಕ್ಕಿಲ್ಲದ ಅರಣ್ಯದಲ್ಲಿ ದುರ್ಭಾಗ್ಯಳಾದ ನಾನು ಒಬ್ಬಳೇ ಇದ್ದೇನೆ; ಪ್ರಸೂತಿಯ ಕಷ್ಟವು ಪ್ರಾಪ್ತವಾಗಿದೆ; ನನ್ನ ಆಶೆಯು ಹಾಳಾಯಿತು; ಇಂಥಾ ನನ್ನನ್ನು ಕ್ರೂರಮೃಗಗಳು ನುಂಗಲಿಚ್ಛಿಸುತ್ತವೆ. ಆದದ್ದರಿಂದ ದುರ್ದೈವಿಯು ಗಂಗಾಪ್ರವಾಹದಲ್ಲಿ ಬೀಳುತ್ತೇನೆ,

ಲಕ್ಷ್ಮಣ— ಅಕಟಕಟಾ!! ಇದೇನೋ ವಿಪರೀತ ಶಬ್ದವು ಕಿವಿಗೆ ಬೀಳುತ್ತದೆ ?

ಸೂತ್ರಧಾರಕನು —

||ವಸಂತತಿಲಕ||

ಕಾಂತಾರದೊಳ್ಕಳುಹಿಬಿಟ್ಟನು ರಾಮರಾಜಂ ।
ತಾ, ತನ್ನರಾಣಿಯು ಧರಿತ್ರಿಯ ಪುತ್ರಿಯನ್ನು ॥
ಬಾಲಾಕೆಗೇ ಪ್ರಸವಕಾಲದ ಕಷ್ಟವೂನೋ ।
ವಂ ತಾಳದೇ ಕೆಡೆದಸಳ್ ಸತಿ ಗಂಗೆಯಲ್ಲಿ ॥ ೨ ॥

(ಹೀಗೆಂದು ಹೊರಟು ಹೋಗುತ್ತಾನೆ)

ರಾ — ದೇವೀ, ಒಂದುಕ್ಷಣ ಮಾತ್ರ ಅವಕಾಶವನ್ನು, ತಾಳು;

ಲಕ್ಷ್ಮಣ — ಅಣ್ಣಾ, ಇದು ನಾಟಕವಲ್ಲವೇ ?

ರಾ— ಹಾ ದೇವಿ! ದಂಡಕಾರಣ್ಯವಾಸದಲ್ಲಿ ಸುಖವನ್ನು ಕೊಟ್ಟ ಪ್ರಾಣಸಖಿಯೇ! ಈ ನಿಷ್ಕರುಣಿಯಾದ ರಾಮನಿಂದ ನಿನಗೆ ದುರ್ದೈವದ ಇಂಥಾ ಕಷ್ಟವು ಒದಗಿತೇ ?

ಲಕ್ಷ್ಮಣ —ಅಣ್ಣಾ ಇದೇನು? ಈ ನಾಟಕದಲ್ಲಿ ಏನೇನು ನಡೆಯುವದೋ, ಅದನ್ನೆಲ್ಲಾ ಮೊದಲು ಸಮಾಧಾನದಿಂದ ನೋಡಿ.

ರಾಃ—ಇಗೋ ನೋಡು, ಈ ವಜ್ರಮಯನಾದ ರಾಮನು ಅದಕ್ಕೂ ಸಿದ್ಧನಾಗೇ ಇದ್ದಾನೆ.

(ಈ ಬಳಿಕ ಒಬ್ಬೊಬ್ಬನು ಕೂಸನ್ನು ತೊಡೆ ಮೇಲಿಟ್ಟುಕೊಂಡಿರುವ ಪೃಥ್ವೀಗಂಗಾದೇವಿಯರಿಂದ ಕೂಡಿ, ಸೀತೆ ಬರುತ್ತಾಳೆ,)

ರಾಃ—ತಮ್ಮಾ ಲಕ್ಷ್ಮಣಾ, ಬುದ್ಧಿಗೆ ತಿಳಿಯದಂಥ, ಅಗಾಧವಾದಂಥ ದುಃಖಾಂಧಕಾರದಲ್ಲಿ ನಾನು ಹೊಕ್ಕೆನು; ಆದದ್ದರಿಂದ ನನ್ನನ್ನು ಜೋಕೆಮಾಡು (ಎಂದು ಮೂರ್ಛಿತನಾಗುತ್ತಾನೆ)

ಗಂಗೆಯು—

||ವಸಂತತಿಲಕ||

ನಿಲ್ಲಿನ್ನು ದುಃಖಿಸದಿರೌ ಮಿಥಿಲೇಂದ್ರಪುತ್ರಿ ।
ಕಲ್ಯಾಣಿ ನೀಂ ನಿನಗೆ ಸಂತಸದೇಳ್ಗೆಯಕ್ಕುಂ ॥
ಇಲ್ಲಿತ್ತ ನೋಡವಳಿಮಕ್ಕಳ ಸೂರ್ಯವಂಶ ।
ಕ್ಕೆಲ್ಲಾ ಸಕಾರಕರ ಪೆತ್ತಿಹೆ ನೀರಿನಲ್ಲಿ ॥ ೩ ॥

ಜಾನಕಿ (ಜಾಗ್ರತಳಾಗಿ) ನಾನು ಅವಳಿಮಕ್ಕಳನ್ನು ಹಡೆದೆನೇ? ಒಳ್ಳೇದಾಯಿತು. ನಮ್ಮ ಪ್ರಾಣದೊಡೆಯರು ಎಲ್ಲಿದ್ದಾರೆ! ಹಾ ಆರ್ಯಪುತ್ರರೇ! (ಎಂದು ಮೂರ್ಛಿತಳಾಗುತ್ತಾಳೆ)

ಲಕ್ಷ್ಮಣ—(ಪಾದಗಳ ಮೇಲೆ ಬಿದ್ದು) ಅಣ್ಣಾ! ಅಣ್ಣಾ! ಏಳು, ನಮ್ಮ ಕಲ್ಯಾಣವಾಯಿತು, ರಘುವಂಶಕ್ಕೆ ಮಂಗಳಕಾರಕವಾದ ಅಂಕುರಗಳ ಉತ್ಪತ್ತಿಯಾಯಿತು (ರಾಮನ ಮುಖವನ್ನು ನೋಡಿ) ಅಯ್ಯೋ ಕಷ್ಟವೇ! ನಮ್ಮ ಪ್ರಭುವಿನ ಕಣ್ಣುಗಳಿಂದ ಅಶ್ರುಧಾರೆಯು ಹರಿಯುತ್ತದೆ. ಇನ್ನೂ ಮೂರ್ಛೆಯನ್ನು ಬಿಟ್ಟು ಏಳುವದಿಲ್ಲವಲ್ಲಾ ? ಏನು ಮಾಡಲಿ? (ಎಂದು ಗಾಳೀ ಹಾಕುತ್ತಾನೆ)

ಪೃಥ್ವೀ-ಗಂಗಾದೇವಿಯರು —(ಸೀತೆಗೆ) ಮಗಳೇ! ಏಳು ಏಳು!

ಜಾನಕಿ—(ಎಚ್ಚೆತ್ತು) ಎಲೌ! ತಾಯಿಗಳಿರಾ! ನೀವು ಯಾರು?

ಪೃಥ್ವಿ— ಈಕೆಯು ನಿಮ್ಮ ಅತ್ತೆಯಮ್ಮನವರ ಕುಲದೇವತೆಯು! ಗಂಗಾದೇವಿಯು.

ಜಾನಕಿ—ಎಲೌ ಮಹಾನುಭಾವಳೇ, ತಾಯಿ ಗಂಗೇ, ನಿನಗೆ ನಮಸ್ಕಾರವು.

ಗಂಗಾ—ಮಗಳೇ! ಪಾತಿವ್ರತ್ಯದಿಂದ ಸಂಪಾದಿತವಾದ ಕಲ್ಯಾಣಸಂಪದವನ್ನು ಅನುಭವಿಸೌವಾ.

ಲಕ್ಷ್ಮಣ—ಇದು ನಮ್ಮ ಮೇಲೆ ಅನುಗ್ರಹವಾಯಿತು.

ಗಂಗಾ—ಮಗಳೇ! ಈಕೆಯು ನಿನ್ನ ತಾಯಿ ಭೂದೇವಿಯು.

ಜಾನಕಿ—ಅಯ್ಯೋ ಔವಾ, ಇಂಥಾ ಸಂಕಟದಲ್ಲಿ ನೀನು ನನ್ನನ್ನು ಕಂಡಿಯಾ?

ಪೃಥ್ವೀ—ಬಾರೌ ಮಗಳೇ, ಬಾರೇ, ಕಂದಮ್ಮಾ!

(ಎಂದು ಸೀತೆ ಮನ್ನಪ್ಪಿ ಮೂರ್ಛಿತೆಯಾಗುತ್ತಾಳೆ)

ಲಕ್ಷ್ಮಣ—ಒಳ್ಳೇದಾಯಿತು. ಅತ್ತಿಗೆಯವರಿಗೆ ಗಂಗಾ ಭೂದೇವಿಯರ ಸಹಾಯವು ದೊರೆಯಿತು. ಇನ್ನು ನಾನು ನಿಶ್ಚಿಂತನಾದೆನು.

ರಾ—(ಎಚ್ಚೆತ್ತು ಅತ್ತಕಡೆಗೆ ನೋಡಿ) ಈಗನಡೆದ ವಿಚಾರವನ್ನು ನೋಡಿದರೆ ಕಾರುಣ್ಯದಿಂದ ಮನಸು ಕರಗುತ್ತದೆ; ಎಲ್ಲವನ್ನೂ ತಾಳಿಕೊಳ್ಳುವ ಭೂದೇವಿಯೂ ಪುತ್ರವಾತ್ಸಲ್ಯದಿಂದ ದುಃಖಪಡುತ್ತಾಳೆ. ಆದದ್ದರಿಂದ ಮಕ್ಕಳ ಮೇಲಿನ ಅಕ್ಕರೆಯು ಹೆಚ್ಚಿನದು. ಅಥವಾ ಈ ಮೋಹದ ತೊಡಕು ಸರ್ವಸಾಧಾರಣವಾ

ಹದ್ದರಿಂದ ಎಲ್ಲಾ ಪ್ರಾಣಿಗಳ ಅಂತರಂಗದಲ್ಲಿ ಸಂಚರಿಸುತ್ತೇ ಇರುತ್ತದೆ. ಇದು ಸಂಸಾರಕ್ಕೆ ತಂತುವಾಗಿದೆ; ಇದು ಎಂಥವರಿಗಾದರೂ ದುಃಖವನ್ನು ಕೊಡದೆ ಬಿಡಲಿಕ್ಕೇ ಇಲ್ಲ.

ಗಂಗಾ— ತಂಗೀ ಜಾನಕೀ, ಅಕ್ಕಾ ಲೋಕಮಾತೇ ಭೂದೇವೀ, ಏಳಿರವ್ವಾ ಏಳಿರಿ, ಸಮಾಧಾನವನ್ನು ತಾಳಿರಿ.

ಪೃಥ್ವೀ— ತಾಯಿ ಭಾಗೀರಥೀ, ಸೀತೆಯನ್ನು ಹಡೆದು ಹ್ಯಾಗೆ ಸಮಾಧಾನವನ್ನು ತಾಳಲಿ?

॥ವಸಂತತಿಲಕ॥

ಘೋರಾಸುರಾಲಯದ ರಾಕ್ಷಸಮಧ್ಯವಾಸಂ ।
ಪ್ರಾರಂಭದಲ್ಲಿ ಚಿರಕಾಲವುದಾಯ್ತು ಸಾಂಗಂ ॥
ಮೀರಿರ್ಪುದಾಗಿನದನಾಲಿಸಲತ್ಯಸಹ್ಯಂ ।
ಕ್ರೂರಾಪವಂ ಮಗಳಿಗಾದುದಿದುಂ ದ್ವಿತೀಯಂ ॥೪॥

ಗಂಗಾ—ಅಕ್ಕಾ! ಲೋಕಮಾತೇ, ನೀನರಿಯದ್ದು ಯಾವದದೆ?

॥ ವಸಂತತಿಲಕ ॥

ಪ್ರಾರಬ್ಧ ಕರ್ಮವಿಕವಂತೆ ಫಲಂಗಳನ್ನು ।
ಬೀರಲ್ಕೆ ಜೀವಿಗಳಿಗೈದುವ ದೈವಕಿರ್ಪಾ ॥
ದ್ವಾರಂಗಳಂ ತಡೆಯುಬಲ್ಲ ಮಹಾನುಭಾವರ್ ।
ದಾರುಂಟು? ದಾವೆಡೆಗೆ? ತಾಯಿಧರಿತ್ರಿ! ಪೇಳಾ; ॥ ೫ ॥

ಪೃಥ್ವಿ— ಗಂಗಕ್ಕಾ, ನೀನು ಯಥಾರ್ಥವಾಗಿ ಮಾತಾಡುತ್ತೀ, ಅಥವಾ, ರಾಮಭದ್ರನಿಗಾದರೂ ಇದು ಯೋಗ್ಯವಾಗಿದೆಯಲ್ಲವೇ?

॥ ವಸಂತತಿಲಕ ॥

ಚಿಕ್ಕಂದು ಕೈವಿಡಿದನಾಗಿನ ತನ್ನ ವಾಕ್ಯಂ ।
ಮುಕ್ಕಪ್ಪುದಂ ಬಗೆಯನೆನ್ನನುಮಗ್ನಿಯನ್ನುಂ ॥
ತಕ್ಕೊಳ್ಳನಾ, ಕ್ಷಕುರನು ಗಣಿಸಂ; ಪ್ರವಾಣ ।
ಕ್ಕಿಕ್ಕಂ ಸ್ವಸಂತತಿಯ ಪತ್ನಿಯ ಶೀಲವನ್ನು ॥ ೬ ॥

ಜಾನಕಿ—ಔವ್ವಾ, ನನಗೆ ಪ್ರಾಣನಾಥರನ್ನು ನೆನಪುಮಾಡಿಕೊಟ್ಟೆ.

ಪೃಥ್ವಿ— ಆ ಏನೇ ಗಯ್ಯಾಳೀ; ಇನ್ನೆಲ್ಲಿಯ ನಿನ್ನ ಪ್ರಾಣನಾಥರೇ?

ಸೀತೆ—[ಲಜ್ಜಿತಳಾಗಿ ಕಣ್ಣೀರಿಕ್ಕುತ್ತಾ] ಹೌದವ್ವಾ, ಈ ಕಾಲಕ್ಕೆ ನೀನಂದದ್ದೇ ವಿಹಿತವದೆ.

ರಾ—ತಾಯಿ! ವಸುಂಧರೇ! ಸತ್ಯವಾಡಿದಿ, ನಾನು ಇಷ್ಟು ಕರ್ಕಶನಾಗಿದ್ದೇನೆ.

ಗಂಗಾ—ಅಕ್ಕಾ ಮಹಾನುಭಾವಳೇ! ಭೂದೇವೀ! ನೀನು ಈ ಚರಾಚರ ಜಗತ್ತಿನ ಶರೀರವಾಗಿದ್ದು ಅಜ್ಞಾನಿಯಂತೆ ಅಳಿಯನ ಮೇಲೆ ಮುನಿಸುಗುಟ್ಟುತ್ತೀ?

॥ ಮತ್ತೇಭವಿಕ್ರೀಡಿತಂ ॥

ಬೆಳೆದತ್ತೀಜನನಲ್ಲಿ ದುರ್ಯಶಮಸಹ್ಯಂ, ವಹ್ನಿಯೊಳ್ ಶುದ್ಧಿಯಾ ।
ದಳು ಲಂಕಾಪುರದಲ್ಲಿ ದೂರದೊಳದನ್ನೆಂತೀಜನರ್ ನಂಬುವರ್ ॥
ನಳಿನಾಪ್ತಾನ್ವಯು ಭೂವರರ್ಗಿದು ಕುಲದ್ರವ್ಯಂ ಪ್ರಜಾರಂಜನಂ ।
ಬಳಿಕೇಂ ಗೈವನು? ಕಂದನಿಂತು ಬರಲಿಕ್ಕಟ್ಟೆತ್ತಲಿಂದಿತ್ತಲಿಂ ॥ ೭ ॥

ಲಕ್ಷ್ಮಣ—ಎಲ್ಲರಲ್ಲಿ ದೇವತೆಗಳು ಅಬಾಧಿತಜ್ಞಾನಸಂಪನ್ನರಿರುತ್ತಾರೆ; ಅವರಲ್ಲಿ ಗಂಗಾದೇವಿಯು ಮತ್ತೂ ಹೆಚ್ಚಿನವಳು, ಆದದ್ದರಿಂದ ಭಗವತೀ ಗಂಗೇ, ನಿನಗೆ ನಮಸ್ಕಾರವಿರಲಿ.

ರಾ—ತಾಯಿ! ಭಗೀರಥರಾಜನ ಮನೆತನದಲ್ಲಿ ನಿನ್ನ ಪ್ರಸಾದವು ಇದೇ ಪ್ರಕಾರ ಮೊದಲಿಂದ ನಿಲ್ಲುತ್ತಾ ಬಂದದೆ.

ಪೃಥ್ವಿ—ಅಕ್ಕಾ! ಗಂಗಾದೇವೀ, ನಾನು ಯಾವಾಗಾಗಲೂ ನಿಮ್ಮವರಲ್ಲಿ ಪ್ರಸನ್ನಳೇ ಇದ್ದೇನೆ. ಆದರೆ ಏನುಮಾಡಲಿ? ತಡೆಯಕೂಡದ ಪ್ರೇಮೋದ್ರೇಕದಿಂದ ಹೀಗೆ ನುಡಿದೆನು. ಸೀತೆಯ ಮೇಲೆ ರಾಮಭದ್ರನಿಗಿರುವ ಪ್ರೀತಿಯನ್ನು ನಾನು, ಅರಿಯನೇ ಹ್ಯಾಗೆ?

॥ ವಸಂತತಿಲಕ ॥

ಕಂದವ್ವನಂ ತೊರೆದು ದೈವದೆ, ಜೀವಚೇತ ।
ಸ್ಪಂದಂ ರಘೂದ್ವಹನಳಲ್ದ ಪನಂದಗೆಟ್ಟಂ ॥
ಕಂದು ಪ್ರಜಾನಿಕರ ಪುಣ್ಯವಿಶೇಷದಿಂದಂ ।
ತಾಂ ಧೈರ್ಯದಿಂದಳಿಸಮರ್ಥತೆಯಿಂದೆ ಬಾಳ್ವಂ ॥ ೮ ॥

ರಾ—[ಕರುಣಾಶ್ರುಗಳನ್ನು ತಂದು] ಹಿರಿಯರು ಮಕ್ಕಳ ಮೇಲೆ ಹೀಗೆ ದಯಾಳುಗಳಾಗಿರುತ್ತಾರೆ.

ಸೀತೆ—[ ಅಳುತ್ತಾ, ಕೈ ಜೋಡಿಸಿಕೊಂಡು] ಅವ್ವಾ ನನ್ನನ್ನು ನಿನ್ನ ಹೊಟ್ಟೆಯಲ್ಲಿ ಅಡಗಿಸಿಕೊಳ್ಳಬಾರದೇನೇ? ನಾನು ಈ ದುಃಖವನ್ನು ತಾಳಲಾರೆನು.

ರಾ—ಹೌದು, ಇನ್ನೇನು ಹೇಳಬೇಕು?

ಗಂಗಾ—ಮಗಳೇ! ಜಾನಕೀ! ಒಳಿತನ್ನು. ನೀನು ಸಾವಿರಾರುವರ್ಷಗಳ ವರೆಗೆ ಸುಖದಿಂದ ಇರುವವಳಾಗು.

ಪೃಥ್ವಿ—ಮಗಳೇ, ಇನ್ನೂ ನಿನ್ನಿಂದ ನಿನ್ನ ಕೂಸುಗಳ ರಕ್ಷಣೆಯಾಗತಕ್ಕದ್ದುಂಟು.

ಸೀತೆ—ಅಯ್ಯೋ ನಾನು ಅನಾಥಳಲ್ಲವೇ? ನನ್ನಂಥವಳಿಂದ ಮಕ್ಕಳ ಜೋಪಾನವು ಹ್ಯಾಗಾದೀತು?

ರಾ—ಎಲೈ ಹೃದಯವೇ! ನೀನು ವಜ್ರಮಯವಾಗಿದ್ದೀ!

ಗಂಗಾ—ತಂಗೀ! ನೀನು ಸನಾಥಳಾಗಿದ್ದರೂ, ಅನಾಥಳೆಂಬದು ಹ್ಯಾಗೆ?

ಸೀತೆ—ಇನ್ನು ದುರ್ಭಾಗ್ಯಳಾದ ನನ್ನ ಸನಾಥತ್ವವು ಯಾವ ಪ್ರಕಾರದ್ದಿರಬಹುದು?

ಪೃಥ್ವಿಗಂಗಾದೇವಿಯರು—ಛೀ! ಹುಚ್ಚೀ! ಒಳಿತನ್ನು:—

॥ ವಸಂತತಿಲಕ ॥

ನಿನ್ನಿಂ ಜಗತ್ರಯಕೆ ಮಂಗಳಸಂಪದಂಗಳ್ ।
ನಿನ್ನಾತ್ಮತ್ವಮಂ ಜರಿವೆ ಜಾನಕಿ ಏತು ಪೇಳಾ ॥
ನಿನ್ನಂಗಸಂಗದೆ ಪವಿತ್ರತೆ ಪೆರ್ಚಿತೆಮ್ಮೊಳ್ ।
ಕನ್ಯಾಶಿರೋಮಣಿ ಜಗಜ್ಜನವಂದ್ಯೆ ನೀನು ॥ ೬ ॥

ಲಕ್ಷ್ಮಣ—ಅಣ್ಣಾ! ಕೇಳಿದಿರಾ?

ರಾ—ಇದನ್ನು ಜನರು ಕೇಳತಕ್ಕದ್ದು!

[ಪಡೆದೆಯಲ್ಲಿ ಕಲಕಲ ಶಬ್ದವಾಗುತ್ತದೆ]

ರಾ—ಇದೇನೋ ಅದ್ಭುತವಾಗಿ ತೋರುತ್ತದೆ.

ಸೀತೆ—ಔವಯ್ಯಾ! ಅಂತರಿಕ್ಷದಲ್ಲಿ ಇಷ್ಟು ಕೋಲಾಹಲಧ್ವನಿಯು ಏನು ಕಾರಣ ಆಗುತ್ತದೆ?

ದೇವಿಯರಿಬ್ಬರು—ಹಾ! ತಿಳಿಯಿತು:—

॥ ಆರ್ಯಾವೃತ್ತ ॥

ಮಿಸುಗುವವಭ್ರದೊಳಸ್ತ್ರ ।
ಪ್ರಸರಂಗಳ್ ಜೃಂಭಕಾದಿಗಳಿವಕ್ಕೆ ॥

ಕೃಶಾಶ್ವನುಂ ಕೌಶಿಕಮುನಿ ।
ದಶಕಂಠಹರಂ ಯಥಾಕ್ರಮಂ ಗುರುಗಳ್ ॥ ೧೧ ॥

[ವಾಕ್ಯ ಶಬ್ದವಾಗುತ್ತದೆ.]

॥ ವಸಂತತಿಲಕ ॥

ಏ ದೇವಿ ಸೀತೆ ನತಿ ನಿನ್ನಡಿಗಳ್ಗೆ ತಾಯೊ ।
ಆಧಾರವೌ ನಮಗೆ ನಿನ್ನಸುಪುತ್ರಯುಗ್ಮಂ ॥
ತಾ ಧ್ಯಾನಕೀಗಸತಿ ಚಿತ್ರವನೋಳ್ಪಕಾಲ ।
ಕ್ಕಾದೇವದಾಶರಥಿಯಾಡಿದ ವಾಕ್ಯವನ್ನು ॥ ೧೧ ॥

ಸೀತೆ—ಇದು ಬಹಳ ಆನಂದದ ಮಾತದೆ; ಯೂಕಂದರೆಃ—ಅಸ್ತ್ರದೇವತೆಗಳು ಪ್ರಸನ್ನರಾಗಿ ಅನುಗ್ರಹವನ್ನು ಮಾಡುತ್ತಾರೆ.

ಲಕ್ಷ್ಮಣ—ಆ ಕಾಲಕ್ಕೆ ಶ್ರೀರಾಮನು ಸೀತಾದೇವಿಯರಿಗೆ “ ಇನ್ನು ಇವು ನಿಶ್ಚಯವಾಗಿ ನಿನ್ನ ಸಂತತಿಗಳನ್ನು ಆಶ್ರಯಿಸುತ್ತವೆ ” ಎಂದು ಹೇಳಿದ್ದನು; ಹೌದು.

ಗಂಗಾ-ಭೂಮಿಯರು—

॥ ವಸಂತತಿಲಕ ॥

ನಿರ್ಮ್ಮೆಲ್ಲವರ್ಗೆ ನಮಗಂ ಪರಮಾಪ್ತಗಳ್ಗೆ ।
ನಿರ್ಮ್ಮಂ ಪರಿಗ್ರಹಿಸಿದಂ ಪ್ರಭುರಾಮಭದ್ರಂ ॥
ಸುಮ್ಮಾನದಿಂದೊಲಿದಿರಾತನ ಬಾಲಕರ್ಗೆ ।
ನಮ್ಮೊಳ್ಳಿತಾಯ್ತು ನಿಮಗಿರ್ಕೆ ಶುಭೋದಯಂಗಳ್ ॥ ೧೨ ॥

ರಾ—ಈಗ ನನಗೆ ಏನಾಗುತ್ತಿರಬಹುದು ?

॥ ವಸಂತತಿಲಕ ॥

ಆನಂದವಿಸ್ಮಯತರಂಗಗಳನ್ನು ಕೂಡಿ ।
ತಾನೇಳ್ವುದೆನ್ನ ಕರುಣಾರಸದೂರ್ಮಿಮಾಲೆ ॥
ಏನೋ ವಿಕಾರವನು ಪುಟ್ಟಿಪುದೆನ್ನೊಳೀಗಲ್ ।
ನಾನಂತದಂ ನುಡಿಯಲಾರೆನು ಹೀಗಿದೆಂದು ॥ ೧೩ ॥

ದೇವಿಯರಿಬ್ಬರೂ—ಮಗಳೇ, ಈಗಲೇ ನಿನ್ನ ಮಕ್ಕಳು ರಾಮಭದ್ರನಂತೆ ಸಮರ್ಥರಾದರೆಂದು ತಿಳಿ.

ಸೀತೆ—ತಾಯಿಗಳಿರಾ, ನೀವು ಹೇಳುವದೆಲ್ಲ ಸತ್ಯವು, ಈ ನನ್ನ ಮಕ್ಕಳಿಗೆ ಕ್ಷತ್ರಿಯೋಚಿತಸಂಸ್ಕಾರಗಳನ್ನು ಯಾರು ಮಾಡುವರು ?

ರಾ—ಅಯ್ಯೋ!

॥ ಆರ್ಯಾವೃತ್ತ ॥

ಯತಿವರವಶಿಷ್ಠನಿರೆ ।
ಕ್ಷಿತರಘುರಾಜೇಂದ್ರವಂಶವರ್ಧಿನಿಯುಂ ॥
ಕ್ಷಿತಿಜೆಯುಮರಿಯಳ್ ತನ್ನಯ ।
ಸುತರಂ ಸಂಸ್ಕರಿಪ ಕರ್ತರಂ ಕಷ್ಟಂ ॥ ೧೪ ॥

ದೇವಿಯರು—ತಂಗೀ ಜಾನಕೀ, ನಿನಗೆ ಇದರ ಚಿಂತೆ ಯಾತಕ್ಕೆ ? ಸ್ತನ ಪಾನವನ್ನು ಬಿಟ್ಟಕೂಡಲೇ ಈ ಕೂಸುಗಳನ್ನು ವಾಲ್ಮೀಕಿಮುನಿಗಳಿಗೆ ನಾವು ಒಪ್ಪಿಸುತ್ತೇವೆ; ಅವರೇ ಮಕ್ಕಳಿಗೆ ಕ್ಷತ್ರಿಯೋಚಿತಸಂಸ್ಕಾರಗಳನ್ನು ಮಾಡತಕ್ಕವರು.

॥ ಆರ್ಯಾವೃತ್ತ ॥

ರಘುಜನಕರಾಜಸಂತಾ ।
ನಗಳುವೀಪಾಲಕರ್ಗೆಮುಭಯರ್ಗೆ ॥
ಮಗಳೆ, ವಶಿಷ್ಠಾಂಗಿರಸರ ।
ಬಗೆಯಿಂ ವಾಲ್ಮೀಕಿಯುಂ ಗುರುವೆನಿಪ್ಪಂ ॥ ೧೫ ॥

ರಾ—ಶಾಬಾಸ್! ದೇವಿಯರು ಬಹಳ ಉತ್ತಮ ಯೋಚನೆಯನ್ನು ಮಾಡಿದರು.

ಲಕ್ಷ್ಮಣ—ಅಣ್ಣಾ, ನಾನು ದೃಢನಿಶ್ಚಯದಿಂದ ಹೇಳುತ್ತೇನೆ; ಈ ಎಲ್ಲಾ ಲಕ್ಷಣಗಳಿಂದ ಆ ಇಬ್ಬರೂ ಮಕ್ಕಳು ಕುಶಲವರಾಗಿರಬೇಕು ಎಂದು ತಿಳಿಯುತ್ತದೆ.

॥ ವಸಂತತಿಲಕ ॥

ಶ್ರೀರಾಮ ಕೇಳಿವರು ಹುಟ್ಟುತೆ ಶಸ್ತ್ರವಿದ್ಯಾ ।
ಪಾರಂಗತರ್ ಪರಿಕಿಸುತ್ತಿರೆ ನಿನ್ನಮಕ್ಕಳ್ ॥
ಈರಾರುವರ್ಷದವರಾಗಿಸೋಕುವಾರರ್ ।
ವೀತರ್ಕಳಾದಿಕವಿಯಿಂ ಕೃತಗೋತ್ರಕೃತ್ಯರ್ ॥ ೧೬ ॥

ರಾ—ತಮ್ಮಾ ಲಕ್ಷ್ಮಣಾ, ಈ ಹುಡುಗರನ್ನು ನೋಡಿ ನನ್ನ ಮನಸ್ಸು ಹರಿದಾಡುತ್ತದೆ; ನಾನು ಹುಚ್ಚನಾದೆನು; ನನಗೆ ಏನೂ ತಿಳಿಯವಲ್ಲದು.

ಪೃಥ್ವಿ—ಬಾ ಮಗಳೇ ಬಾ, ರಸಾತಳವನ್ನು ಪಾವನ ಮಾಡಲಿಕ್ಕೆ ನಡೆ.

ಸೀತೆ—ಔವಾ, ನಾನು ಇಂಥಾ ಪ್ರಾಣಸಂಕಟವನ್ನು ತಾಳಲಾರೆನು; ನನಗೆ ನಿನ್ನ ಹೊಟ್ಟೆಯಲ್ಲಿ ಸ್ಥಳವನ್ನು ಕೊಡಬಾರದೇ ?

ರಾ—ಇನ್ನು ಇದಕ್ಕೂ ಹೆಚ್ಚಿನದು ಏನಾಗತಕ್ಕದ್ದುಳಿದದೆ ?

ಪೃಥ್ವಿ—ಔವಾ ಜಾನಕೀ, ಕೇಳು ನಿನ್ನ ಮಕ್ಕಳು ಸ್ತನಪಾನವನ್ನು ಬಿಡುವವರೆಗೆ ಗಟ್ಟಿಮನಸ್ಸುಮಾಡಿ ಜೀವವನ್ನು ಹಿಡಿದಿರು. ಆ ಬಳಿಕ ನಿನ್ನ ಚಿತ್ತಕ್ಕೆ ಬಂದಂತೆ ಮಾಡು.

ಗಂಗಾ—ಹೌದು, ಈ ಮಾತು ಸಯುಕ್ತಿಕವಾಗಿದೆ.

( ಆ ಬಳಿಕ ಗಂಗಾಪೃಥ್ವೀ ಜಾನಕೀಯರು ಹೊರಟು ಹೋಗುತ್ತಾರೆ )

ರಾ—ಏನು ಕಡೆಗೆ ಜಾನಕಿಯ ವಿಲಯವೇ ನಿಶ್ಚಯವಾಯಿತೇ ? ಹಾ ದೇವಿ! ದಂಡಕಾರಣ್ಯವಾಸದ ಪ್ರಿಯಸಖಿಯೇ, ಎಲೈ ಚಾರಿತ್ರದೇವತೆಯೇ, ನನ್ನನ್ನು ಬಿಟ್ಟು ಲೋಕಾಂತರಕ್ಕೆ ಹೋದೆಯಾ ? ( ಎಂದು ಮೂರ್ಛಿತನಾಗುತ್ತಾನೆ )

ಲಕ್ಷ್ಮಣ—ಎಲೈ ಮಹಾನುಭಾವನೇ ವಾಲ್ಮೀಕಿಯೇ, ನಮ್ಮ ಮೇಲೆ ದಯಮಾಡು, ನಿನ್ನ ಕಾವ್ಯದ ಅರ್ಥವು ಇದೇ ಸರಿಯೇ ?

( ನೇಪಥ್ಯದಲ್ಲಿ ಶಬ್ದವಾಗುತ್ತದೆ ) ಇನ್ನು ವಾದ್ಯಗಳನ್ನು ನಿಲ್ಲಿಸಿರಿ ಭಗವಾನ ವಾಲ್ಮೀಕಿ ಮಹಾಮುನಿಗಳಿಂದ ನಿರೂಪಿಸಲ್ಪಡುವ ಪವಿತ್ರಾಶ್ಚರ್ಯಕರ ಸಂಗತಿಯನ್ನು ಸಂಭಾವಿಸಿರಿ.

ಲಕ್ಷ್ಮಣ— ( ನಾಲ್ಕು ಕಡೆಗೆ ನೋಡುತ್ತಾ )

‖ ವಸಂತತಿಲಕ ‖

ಗಂಗೋದಕಂ ಮಥಿಸಿದಂತೆ ತುಳುಂಕುತಿರ್ಕುಂ ।
ಸಂಗೋದ್ಭವಾದುದು ಸುರರ್ಷಿಗಳಿಂ ಸಮಾರ್ಧ್ವಂ ‖
ಕಂಗಳ್ಗಿದಚ್ಚರಿ । ನದೀಜಲಮಧ್ಯದಿಂದೇ ।
ಗಂಗಾಮಹೀಸಹಿತಳತ್ತಿಗೆ ಬರ್ಪಳೀಗಳ್ ‖ ೧೭ ‖

(ಮತ್ತೆ ಪಡದೆಯಲ್ಲಿ ಶಬ್ದವು)

‖ ಆರ್ಯಾವೃತ್ತ ‖

ದೇವಿ, ಅರುಂಧತಿ ನಮ್ಮಂ ।
ಭಾವಿಸು ಗಂಗಾಧರಿತ್ರಿಯರ್ ನಾವು ‖
ಈವಧು ಸೀತೆ, ಮಹಾಸತಿ ।
ಪಾವನೆ ನಿನಗರ್ಪಿತಳ್ ಜಗದ್ವಂದ್ಯೇ ‖ ೧೮ ‖

ಲಕ್ಷ್ಮಣ—ಏನು ನಮ್ಮ ಸುದೈವವಿದು? ಆಶ್ಚರ್ಯವು! ಆಶ್ಚರ್ಯವು! ಅಣ್ಣಾ ಅಣ್ಣಾ! ನೋಡು, ಅತ್ತನೋಡು! ಓಹೋ! ಬಹಳ ಕಷ್ಟವಾಯಿತು! ಇನ್ನೂ ನಮ್ಮ ಪ್ರಭುವು ಎಚ್ಚತ್ತುಕೊಳ್ಳುವದಿಲ್ಲ.

(ಆ ಬಳಿಕ ಅರುಂಧತೀ ಸೀತಾದೇವಿಯರು ಬರುತ್ತಾರೆ.)

ಅರುಂಧತಿಯು—

॥ವಸಂತತಿಲಕ॥

ಬಾ ವೀರಮಾತೆ ಜನಕಾತ್ಮಜೆ ಸೀತೆ ಬಾರೌ ।
ಬಾ ವೇಗದಿಂ ಮಗಳೆ ಬಾ ಬಿಡು ಲಜ್ಜೆಯನ್ನು॥
ಶ್ರೀವತ್ಸದೊಳ್ ಸುಖದಸೋಕಿನ ಕಯ್ಯನಿಟ್ಟಿಂ ।
ನೀವತ್ಸನಂ ಬದುಕಿಸೌ ರಘುಸಿಂಹನನ್ನು ॥ ೧೯ ॥

ಸೀ—(ಸ್ಪರ್ಶಮಾಡುತ್ತಾ) ಆರ್ಯಪುತ್ರರು ಏಳಬೇಕು, ಏಳಬೇಕು.

ರಾ—(ಎದ್ದು ಆನಂದಭರಿತನಾಗಿ) ಎಲ್ಲೈ ಏನಿದು? (ಚನ್ನಾಗಿ ನೋಡಿ ಹರ್ಷದಭರಿತನಾಗಿ) ಯಾರಿವರು? ದೇವಿಯು!! (ಹಾಸ್ಯಲಜ್ಜಾಯುಕ್ತನಾಗಿ) ಇವರು ಯಾರು ಮತ್ತೆ? ಅರುಂಧತೀದೇವಿಯೋ? ಋಷ್ಯಶೃಂಗಶಾಂತಾದೇವಿಯರಿಂದ ಸಹಿತರಾದ ಯಾವತ್ತು ಗುರುಜನರು ಆನಂದದಿಂದ ಇಲ್ಲಿ ಕೂಡಿದ್ದಾರೆ; ಇದೇನು?

ಅರುಂಧತಿ—ಅಪ್ಪಾ ರಾಮಭದ್ರಾ, ಈಕೆಯು ಭಗೀರಥ ರಾಜನವಂಶದ ಕುಲದೇವತೆಯು, ಗಂಗಾದೇವಿಯು, ನಿನಗೆ ಪ್ರಸನ್ನಳಾಗಿ ನಿಂತಿದ್ದಾಳೆ.

(ಪರದೆಯಲ್ಲಿ ಶಬ್ದವಾಗುತ್ತದೆ.)

ಕೇಳೈ ಜಗದೊಡೆಯನೇ ರಾಮಭದ್ರಾ, ಹಿಂದಕ್ಕೆ ಚಿತ್ರದರ್ಶನಕಾಲವಲ್ಲಿ ನೀನು ನನ್ನೊಡನೆ—"ಇಂಥಾ ನೀನು ನಮ್ಮ ತಾಯಿಯಾಗಬೇಕು; ಈ ವೈದೇಹಿಯು ನಿನ್ನ ಸೊಸೆಯು; ಆದದ್ದರಿಂದ ಅರುಂಧತಿಯಂತೆ ನೀನೂ ಈಕೆಯ ಕಲ್ಯಾಣವನ್ನು ಯಾವಾಗಲೂ ಚಿಂತಿಸುತ್ತಿರು" ಎಂದು ಹೇಳಿದ್ದನ್ನು ಈಗ ಸ್ಮರಿಸು; ನಾನು ನಿನ್ನ ಹೇಳಿಕೆಯಂತೆ ಮಾಡಿ ಋಣಮುಕ್ತಳಾಗಿದ್ದೇನೆ ಕಂಡಿಯಾ?

ಅರುಂಧತಿ—ಈಕೆಯು ನಿಮ್ಮ ಅತ್ತೆಯು, ಮಹಾತ್ಮಳಾದ ಭೂದೇವಿಯು.

(ಪರದೆಯಲ್ಲಿ ಶಬ್ದವಾಗುತ್ತದೆ.)

ಕಂದಾ, ಹಿಂದಕ್ಕೆ ನೀನು ಈವತ್ಸೆ ಜಾನಕಿಯನ್ನು ಬಿಡುವಾಗ—"ಏ ಭಾಗ್ಯಶಾಲಿನೀ ಭೂದೇವೀ, ಈ ನಿನ್ನ ಲೋಕಮಾನ್ಯೆಯಾದ ಕನ್ಯೆಯಕಡೆಗೆ ಅಂತಃಕರಣದಿಂದ ನೋಡು" ಎಂದು ಹೇಳಿದೆಯಲ್ಲ? ಅದೇಪ್ರಕಾರ ಪ್ರಭುವಾಗಿಯೂ

ಮಗನಾಗಿಯೂ ಇರುವ ನಿನ್ನ ಮಾತುನಡಿಸಿ ನಾವು ಇಂದಿಗೆ ಮುಕ್ತಳಾದೆನು.

ರಾ—ನಾನು ಮಹಾಪರಾಧಿಯಾಗಿದ್ದರೂ ಈ ಮಹಾದೇವಿಯರು ನನ್ನ ಮೇಲೆ ಅನುಗ್ರಹವನ್ನೇ ಮಾಡುತ್ತಾರೆ, ನಾನು ನಿರ್ಲಜ್ಜನಿದ್ದೇನೆ. ಎಲೈ ತಾಯಿಗಳಿರಾ! ನಿಮಗೆ ನಮಸ್ಕಾರವು.

ಅರುಂಧತಿ—ಎಲಎಲೈ! ನಗರದಲ್ಲಿಯೂ ದೇಶದಲ್ಲಿಯೂ ಇರುವ ಜನರುಗಳಿರಾ, ಕೇಳಿರಿ! ಮಹಾತ್ಮರಾದ ಜಾಹ್ನವೀವಸುಂಧರಾದೇವಿಯರಿಂದ ಈ ಪ್ರಕಾರವಾಗಿ ಹೊಗಳಲ್ಪಟ್ಟು, ಅರುಂಧತಿಯೆನಿಸುವ ನನ್ನವಶಕ್ಕೆ ಒಪ್ಪಿಸಲ್ಪಟ್ಟಂಥಾ, ಪೂರ್ವದಲ್ಲಿಯೇ ಭಗವಾನ್ವೈಶ್ವಾನರನಿಂದ ಪ್ರಕಟಿತವಾದ ಪುಣ್ಯಚರಿತ್ರೆಯುಳ್ಳಂಥ ದೇವಯಜನಸಂಜಾತೆಯಾದಂಥ, ಸೂರ್ಯಕುಲಕ್ಕೆ ಸೊಸೆಯಾದಂಥ ಸೀತಾದೇವಿಯನ್ನು ಬ್ರಹ್ಮಾದಿದೇವತೆಗಳು ಹೊಗಳಿ ಈಕೆಯನ್ನು ಸ್ವೀಕರಿಸಿರಿ, ನಿಃಸಂಶಯವಾಗಿ ಸ್ವೀಕರಿಸಿರಿ, ಎಂದು ಒಡಂಬಡುತ್ತಾರೆ. ಇದಕ್ಕೆ ನಿಮ್ಮ ಅಭಿಪ್ರಾಯವೇನದೆ? ಅದನ್ನು ಹೇಳಿರಿ

ಲಕ್ಷ್ಮಣ—ನೋಡಿರಿ, ಈಪ್ರಕಾರ ಮಹಾತ್ಮಳಾದ ಅರುಂಧತಿಯಿಂದ ಹಂಗಿಸಲ್ಪಟ್ಟವರಾಗಿ, ಎಲ್ಲ ಪ್ರಜೆಗಳೂ ಪ್ರಾಣಿಗಳೂ ಸೀತಾದೇವಿಯರನ್ನು ನಮಸ್ಕರಿಸುತ್ತಾರೆ; ಇಂದ್ರಾದಿ ಲೋಕಪಾಲಕರೂ, ಮರೀಚ್ಯಾದಿ ಸಪ್ತಋಷಿಗಳೂ ಕುಸುಮವೃಷ್ಟಿಯಿಂದ ಸನ್ಮಾನವನ್ನು ಕೊಡುತ್ತಲಿದ್ದಾರೆ.

ಅರುಂಧತಿ— ಎಲೈ! ಜಗದೊಡೆಯನೇ,

॥ ವಸಂತತಿಲಕ ॥

ಶ್ರೀರಾಮ ಕೊಳ್ಳಿವಳು ನಿನ್ನಳು ಧರ್ಮಪತ್ನಿ ।
ಚಾರಿತ್ರದೇವತೆ ಭವತ್ಪ್ರಿಯೆ, ಪುಣ್ಯಶೀಲೆ ॥
ಆರುಕ್ಮಪುತ್ರಿಕೆಯ ಬಿಟ್ಟವಳೊದಿಗಿನ್ನು ।
ಪೂಣ್ಕೈಸು ಸೀಂ ಕ್ರತುವ ಧರ್ಮವಿಧಾನದಿಃದೆ ॥ ೨೦ ॥

ಸೀತೆ—(ತನ್ನೊಳಗೆ) ಆರ್ಯಪುತ್ರರು ಸೀತಾದುಃಖವನ್ನು ಬಿಡಿಸುವಲ್ಲಿ ಬಲ್ಲವರೇ ಇದ್ದಾರೆ.

ರಾ—ತಾಯಿರಾ, ನಿಮ್ಮ ಅಪ್ಪಣೆಯಾದಂತೆ ನಡೆಯುತ್ತೇನೆ.

ಲಕ್ಷ್ಮಣ—ಇಂದಿಗೆ ನಾನು ಕೃತಾರ್ಥನಾದೆನು.

ಸೀತೆ—ಎಲೈ! ದೈವವೇ ಬದುಕಿಸಿದಿ!

ಲಕ್ಷ್ಮಣ—ಅಮ್ಮಾ ಜಾನಕೀ, ಈ ನಿರ್ಲಜ್ಜ ಲಕ್ಷ್ಮಣನು ಅಭಿವಂದಿಸು ತ್ತಾನೆ.

ಸೀತೆ—ಅಪ್ಪಾ ಲಕ್ಷ್ಮಣಾ, ಆದದ್ದಾಗಿ ಹೋಯಿತು; ದೀರ್ಘಾಯುಷ್ಮಂತ ನಾಗು.

ಅರುಂಧತಿ—ಎಲೈ! ಮಹಾನುಭಾವರಾದ ವಾಲ್ಮೀಕಿಗಳೇ, ಈ ಸೀತೆ ಯ ಮಕ್ಕಳಾದ ಕುಶಲವರನ್ನು ರಾಮಚಂದ್ರನ ವಶಕ್ಕೆ ಒಪ್ಪಿಸಿಬಿಡಿರಿ! (ಎಂದು ಹೊರಟುಹೋಗುತ್ತಾಳೆ)

(ಬಳಿಕ ವಾಲ್ಮೀಕಿಯೂ, ಕುಶಲವರೂ ಬರುತ್ತಾರೆ)

ವಾಲ್ಮೀಕಿ—ಎಲೈ ಮಕ್ಕಳಿರಾ, ಇಲ್ಲಿ ಬನ್ನಿ. ಈತನು ನಿಮ್ಮ ತಂದೆಯಾದ ಶ್ರೀರಘುನಾಥನು; ಈತನು ಲಕ್ಷ್ಮಣನು ನಿಮ್ಮ ಚಿಕ್ಕಪ್ಪನಾಗಬೇಕು; ಈಕೆಯು ನಿಮ್ಮ ತಾಯಿ ಸೀತಾದೇವಿಯು; ಈ ರಾಜರ್ಷಿಯಾದ ಜನಕನು ನಿಮ್ಮ ಮಾತಾ ಮಹನು.

ಸೀತೆ—(ಹರ್ಷಕರಾನಂದಪುಳಕಿತಳಾಗಿ) ಓವಯ್ಯಾ [illegible]ರಿವರು? ಜನಕ ತಾತರೇನು?

ಕುಶಲವರು— ಹಾ ಅಪ್ಪಯ್ಯಾ! ಹಾ ತಾಯೀ! ಹಾ ಮಾತಾಮಹನೇ! ನಾವು ಈಹೊತ್ತು ಧನ್ಯರಾದೆವು.

ರಾಮಲಕ್ಷ್ಮಣರು— [ಹರುಷದಿಂದಾಲಿಂಗಿಸಿ] ಮಕ್ಕಳಿರಾ ನೀವು ನಮ್ಮ ಪೂರ್ವಪುಣ್ಯದಿಂದ ದೊರಕಿದಿರಿ.

ಸೀತೆ— ಹಾ, ಕಂದಾ ಕುಶನೇ, ಬಾಳಾ, ಲವಾ, ಬಾರಪ್ಪಾ, ನಿಮ್ಮ ತಾ ಯಿಯು ಪುನರ್ಜನ್ಮವನ್ನು ಹೊಂದಿ ಬಂದಿದ್ದಾಳೆ; ಬಹಳಹೊತ್ತು ತೆಕ್ಕಿಮುಕ್ಕಿ ಬೀಳಬನ್ನಿರಿ !

ಕುಮಾರರು— (ಹಾಗೇ ಮಾಡಿ) ಓವಾ, ನಾವು ಹುಟ್ಟಿದ್ದು ಇಂದಿಗೆ ಸಫ ಲವಾಯಿತು.

ಸೀತೆ— ಅಯ್ಯಾ ಮಹಾನುಭಾವನೇ, ವಾಲ್ಮೀಕಿಯೇ, ನಿನ್ನ ಅಡಿಗಳಿಗೆ ವಂದಿಸುತ್ತೇನೆ.

ವಾಲ್ಮೀಕಿ— ಮಗಳೇ, ಚಿರಕಾಲದವರೆಗೆ ಹೀಗೇ ಸಂತೋಷದಿಂದಿರು !

ಸೀತೆ— ಈ ಮಾತಿನಲ್ಲಿ ಸಂಶಯವುಂಟೆ ? ಇವರೇ ನಮ್ಮ ಕುಲಗುರುಗ ಳಾದ ವಶಿಷ್ಠರು, ಈತನು ನಮ್ಮ ಅಪ್ಪಯ್ಯನು, ಇವರೇ ನಮ್ಮ ಅತ್ತೆಯುವ

ಇವರು ನಮ್ಮ ಅತ್ತಿಗೆ ಶಾಂದೇವಿಯರು, ಇವರು ಋಷ್ಯಶೃಂಗಭಾವನವರು, ಇವೇ ಸುಪ್ರಸನ್ನವಾಗಿರುವ ಆರ್ಯಪುತ್ರರ ಅಡಿದಾವರೆಗಳು, ಈತನು ಮೈದುನನಾದ ಲಕ್ಷ್ಮಣನು, ಇವರೇ ನನ್ನ ಮಕ್ಕಳು. ಈ ಎಲ್ಲರೂ ಸಂತುಷ್ಟರಾಗಿ ನನ್ನ ಕಣ್ಣಮುಂದಿದ್ದಾರೆ, ಇನ್ನು ನನ್ನ ಸುಖಕ್ಕೆ ಕೊರತೆಯಿಲ್ಲ. ನಾನು ಆನಂದಸಾಗರದಲ್ಲಿ ಮುಳಗಿದೆನು

( ನೈಪಥ್ಯದಲ್ಲಿ ಕೋಲಾಹಲಧ್ವನಿಯಾಗುತ್ತದೆ )

ವಾಲ್ಮೀಕಿ— (ಎದ್ದುನಿಂತುನೋಡಿ) ಇಗೋ ಶತ್ರುಘ್ನನು ಲವಣಾಸುರನನ್ನು ಸಂಹರಿಸಿ ಬಂದಿದ್ದಾನೆ.

ಲಕ್ಷ್ಮಣ— ಕಲ್ಯಾಣಗಳಾಗಲಿಕ್ಕೆ ಹತ್ತಿದವೆಂದರೆ, ಒಂದರ ಹಿಂದೊಂದು ಒತ್ತರಿಸುತ್ತವೆ.

ರಾ— ನಾನು ಇದನ್ನೆಲ್ಲ ನಿಶ್ಚಯವಾಗಿ ಅನುಭವಿಸುತ್ತಿದ್ದರೂ ನನಗೆ ಸತ್ಯವೆಂದು ತೋರವೊಲ್ಲದು; ಅಥವಾ ಅಭ್ಯುದಯಗಳ ಸ್ವಭಾವವೇ ಹೀಗೋ ಏನು!

ವಾಲ್ಮೀಕಿ— ಹೇಳು, ಜಗತ್ಪತಿಯೇ, ಶ್ರೀರಾಮಾ, ನಿನಗೆ ಮತ್ತಾವ ಹಿತವನ್ನು ನಾನು ಮಾಡತಕ್ಕದ್ದು ಉಂಟು ?

ರಾ— ಇದಕ್ಕೂ ಹೆಚ್ಚಿನ ಹಿತವುಂಟೇ? ಒಳ್ಳೇದು! ಮಹಾತ್ಮರ ಅಪ್ಪಣೆಯಾದ ಕಾರಣ ಕೇಳಿಕೊಳ್ಳುತ್ತೇನೆ.

॥ ಮತ್ತೇಭವಿಕ್ರೀಡಿತಂ ॥

ಯಾವೀಸತ್ಕಥೆ ದುಷ್ಕೃತಂಗಳನು ಕೋದಿತ್ತಪ್ಪುದೈ ಶ್ರೇಯಮಂ ।
ಯಾವಲ್ಲೋಕಮನೋಹರಂ ಶುಭಕರಂ ತಾಯಂದದಿಂ ಗಂಗೆವೋಲ್ ॥
ಭಾವಜ್ಞರ್ ಧೃತರೂಪರಾಗಭಿನಯಂಗೊಂಡಿಂತಿದಂ ಭಾವಿಕೆ ।
ಶ್ರೀವಾಗ್ಬ್ರಹ್ಮದಭಿಜ್ಞಪೂರ್ಣ ಮತಿ ಪೇಳಿದಿವ್ಯಸತ್ಕಾವ್ಯಮಂ ॥ ೨೧ ॥

ವಾಲ್ಮೀಕಿ—ಒಳ್ಳೇದು ಯಾಕಾಗವೊಲ್ಲದು.

( ಹೀಗೆ ಎಲ್ಲರೂ ಹೊರಟುಹೋಗುತ್ತಾರೆ. )

( ಸಮ್ಮೇಲನವೆಂಬ ಏಳನೇ ಅಂಕವು ಪೂರ್ಣವಾಯಿತು )

## ಉತ್ತರರಾಮಚರಿತ್ರವೆಂಬ ನಾಟಕವು ಸಂಪೂರ್ಣವು.

॥ ಶ್ರೀರಸ್ತು ॥

---

Printed by M. K. Joshi at the K. P. Works, Dharwar.